

ಶ್ರೀ ಗುರು ವೀರಘಂಟೆ ಮಡಿವಾಳೇಶ್ವರ
ಸೇವಾ ಸಮಿತಿ ಅರ್ಪಿಸುವ:

# ಗಾನ ಭಾರತಿ



-ಗುರುಸ್ವಾಮಿ ಕಲಿಕೇರಿ.

ಶ್ರೀಗುರು ಕಲಿದೇವ ಕಲ್ಲಿನಾಥೇಶ್ವರ ಗ್ರಂಥ ಮಾಲೆಯ ಪುಷ್ಪ-೩

# ಸರ್ವರ ಗಮನಕ್ಕೆ

ನಾನು ರಚಿಸಿ ಹಾಡಿದ ಭಕ್ತಿಗೀತೆ, ಸುಪ್ರಭಾತಗಳು ಹಲವಾರು ಸುಮಾರು ೫೦ಕ್ಕೂ ಹೆಚ್ಚು ಗೀತೆ ಸುಪ್ರಭಾತಗಳನ್ನು ಮದ್ರಾಸಿನ ಕೋಲಂಬಿಯಾ ಕಂಪನಿ ಹಾಗು ದಿ. ಮಾಸ್ಟರ್ ರಿಕಾರ್ಡಿಂಗ ಕಂಪನಿ ಅವರು ರಿಕಾರ್ಡ ಮಾಡಿಕೊಂಡಿದ್ದಾರೆ. ಭಾರತಾದ್ಯಂತ ಪ್ರಸಾರವಾಗಿವೆ. ಧಾರವಾಡ ಗುಲಬುರ್ಗಾ, ಬೆಂಗಳೂರು, ಭದ್ರಾವತಿ, ವಿವಿಧಭಾರತಿ, ಶಿಲೋನ ಮೊದಲಾದ ಆಕಾಶವಾಣಿ ಕೇಂದ್ರಗಳಿಂದ ದಿನಾಲೂ ಒಂದಿಲ್ಲೊಂದು ನನ್ನ ಹಾಡು ಪ್ರಸಾರವಾಗುವದು. ನಾಡಿನ ಮಠ ಮಂದಿರ ಹಾಗು ಸಭೆ ಸಮ್ಮೇಲನಗಳಲ್ಲಿ ನನ್ನ ರಿಕಾರ್ಡ ಹಾಗು ಕೆಸೆಟ್ ಕೇಳಿಬರುತ್ತಿವೆ.

ಇತ್ತಿತ್ತಲಾಗಿ ಲೋಕಲ್ ಕೆಸೆಟ್ ಮಾಡಿ ಹೆಸರಾದ ಗದಗಿನ ಶ್ರೀವೀರೇಶ್ವರ ಸ್ಟೋರ್ಸ ಅವರು "ಗುರುಸ್ವಾಮಿಯವರೆ ನೀವು ದೊಡ್ಡ ಸಂಗೀತಗಾರರು ನಿಮ್ಮ ಸಂಭಾವನೆ ದೊಡ್ಡದು. ನಿಮ್ಮಿಂದ ಹಾಡಿಸುವಷ್ಟು ದೊಡ್ಡ ವ್ಯಾಪಾರ

...ಲಿತು ಹಾಡುತ್ತಿರುವ ವೀರೇಶ
... ಕೆಸೆಟ್ ಮಾಡಿಕೊಳ್ಳುತ್ತೇವೆ
...ದು: ೧)ಕಂಡೆ ನಾ ಕಂಡೆ ೨)
...) ಕಡ್ಲಿಮಟ್ಟಿ ಕಾಶಿಬಾಯಿ ೩)
...)ಏನ ನಡದಾದೊ ೭)ಗುಟ್ಟಿನ
...ಾದ ನನ್ನ ಸ್ವರಚಿತ ಹಾಗು
...ಸಿದ ಹಾಡುಗಳನ್ನು ಕೆಸೆಟ್ಟ
...ಒಟ್ಟಿನಲ್ಲಿ ನಮ್ಮ ಹಾಡುಗಳನ್ನು
...ದ್ದಾರೆ. ಖುದ್ದಾಗಿ ನನ್ನಿಂದಲೆ
... ಸಂಗೀತ ಪ್ರೇಮಿಗಳು ನನ್ನ
... ವೃತ್ತಿ ಸಂಗೀತಗಾರರು
...ಡುವದಕ್ಕೆ ಹಾಗು ಯಾರಾ
...ದಕ್ಕೆ ನಮ್ಮಿಂದ ಒಪ್ಪಿಗೆ

... ಗವಾಯಿಗಳು
...ಪತ್ರಿ ರ ಗದಗ ೫೮೨೧೦೧

# ಗಾನ ಭಾರತಿ

## ಭಕ್ತಿ-ಭಾವ ಭಗವದ್ಗೀತೆಗಳು

ಲೇಖಕರು-

"ಸಂಗೀತ ರತ್ನಾಕರ"

ಶ್ರೀ ಗುರುಸ್ವಾಮಿ ಕಲಿಕೇರಿ ಗವಾಯಿಗಳು

ಪ್ರಕಾಶಕರು:

ಶ್ರೀ ಗುರುವೀರಘಂಟೈ ಮಡಿವಾಳೇಶ್ವರ ಸೇವಾ ಸಮಿತಿ

ಪಂಚರಂಗಸಂಸ್ಥಾನ ಗದ್ದಿಗಿಮಠ, ಕಲಕೇರಿ.

ತಾ. ಸಿಂದಗಿ ಜಿ. ವಿಜಾಪೂರ

ಶ್ರೀ ಗುರು ಕಲಿದೇವ ಕಲ್ಲಿನಾಥೇಶ್ವರ ಗ್ರಂಥಮಾಲೆಯ ಪುಷ್ಪ

ಕಲಿಕೇರಿ ಶ್ರೀ ಗುರುಸ್ವಾಮಿಗಳು ಕೈಕೊಂಡ ಧರ್ಮಪ್ರಸಾರ

# ಪಾದಯಾತ್ರಾ ನಿಧಿ ನೈವೇದ್ಯ: ಗಾನ ಭಾರತಿ



ಪ್ರಥಮ ಮುದ್ರಣ ೧೯೭೪

ದ್ವಿತಿಯ ಮುದ್ರಣ ೧೯೮೪



ಅಚ್ಚುಗಾರ :
ಶ್ರೀ ಮೌನೇಶಕುಮಾರ ವಡಿಗೇರಿ

ಮುದ್ರಣ :
ಪಂಚಾಕ್ಷರ ಪ್ರಿಂಟಿಂಗ್ ಪ್ರೆಸ್, ವೀರೇಶ್ವರಪುಣ್ಯಾಶ್ರಮ ಗದಗ-೫೮೨೧೦೧

ಪ್ರಕಾಶನ ದಿನ :
ಕಲಿಕೇರಿಮಠದ ಕರ್ತೃ ಶ್ರೀ ಗುರುವೀರಘಂಟೈ ಮಡಿವಾಳೇಶ್ವರರು
ಸಜೀವ ಸಮಾಧಿಸ್ಥರಾದ ಮಿತಿ ಮೃಗಶಿರ ನಕ್ಷತ್ರ ಮಾರ್ಗಶಿರ ಪೂರ್ಣಿಮೆ.



೧೯೮೪ ] [ ೫ ರೂಪಾಯಿ







ಸಾಹಿತ್ಯ ಸರಸ್ವತಿ ಸಂಗೀತ ಭಾರತಿ
ಆದಿಶಕ್ತಿ ಶ್ರೀಶ್ರೀಶ್ರೀ ಪರಮೇಶ್ವರಿಯ ಸನ್ನಿಧಿಗೆ
ಕಲ್ಕೇರಿ ಗುರುದೇವರಾದ
ಶ್ರೀ ಗುರುವೀರಘಂಟೈ ಮಡಿವಾಳೇಶ್ವರ
ಧರ್ಮಪ್ರಸಾರಾರ್ಥವಾಗಿ ಶ್ರೀಗುರುಸ್ವಾಮಿ ಗವಾಯಿಗಳು
ಕೈಕೊಂಡ ಪಾದಯಾತ್ರೆಯಲ್ಲಿ ಸಂಗ್ರಹವಾದ ಭಕ್ತರ
ಕಾಣಿಕಾದಲ್ಲಿ ಪ್ರಕಾಶನಗೊಂಡ "ಗಾನ ಭಾರತಿ"ಗ್ರಂಥವು

**ಪಾದಯಾತ್ರಾ ನಿಧಿ ನೈವೇದ್ಯವಾಗಿಸಿ**

ಭಯ-ಭಕ್ತಿಯಿಂದ ಅರ್ಪಿಸಿದ್ದೇವೆ.

— ಪ್ರಕಾಶಕರು.

# ಅಕಾರಾದಿ ಸೂಚಿ

# ಗಾನ ಭಾರತಿ

## ಭಕ್ತಿ-ಭಾವ ಭಗವದ್ಗೀತೆಗಳು

ಗಾನ ಭಾರತಿ
ಭಕ್ತಿ-ಭಾವ ಭಗವದ್ಗೀತೆಗಳು

"ಸಂಗೀತ ರತ್ನಾಕರ"
ಶ್ರೀ ಗುರುಸ್ವಾಮಿ ಕಲಿಕೇರಿ ಗವಾಯಿಗಳು

# ಎಲ್ಲರೊಳು ಒಂದಾದ

ರಾಗ:-ಜೈಜೈವಂತಿ    ತಾಲ:-ದಾದರಾ

ಎಲ್ಲರೊಳು ಒಂದಾದ | ಎಲ್ಲರಿಗೂ ಬೇಕಾದ
ಎಲ್ಲ ಮಹಿಮಾನ್ವಿತರ ಮುಡಿಮಲ್ಲಿಗೆಯಾದ
ಎಲ್ಲ ದೇವರ ದೇವ ಮಹಾದೇವ ತಾನಾದ
ಶಿವಯೋಗಿ ಹಾನ್ಗಲ್ಲ ಗುರುಕುಮಾರ ಶಿವಯೋಗಿ ||

ಜೋಯಿಸರ ಹರಳ ಹಳ್ಳಿ ಜೋಗಿಯಾಗಿ ಬಂದ
ಜಗಕೆ ಜೋತಿಷ್ಯ ನುಡಿದು ಮುಂಭವಿಷ್ಯವ ಕಂಡ
ಧರ್ಮರಕ್ಷೆಗಾಗಿವನು ಜೋಳಿಗೆಯುಂ ಪಿಡಿದ
ಧರೆಯು ಕರ್ಮಗಳನೆಲ್ಲ ಭಿಕ್ಷೆ ಬೇಡಿದ
ನಮಗಮೃತವೀಯುಲು ತಾನೆ ವಿಷವನುಂಡ
ಭುವಿಯು ನಂಜುಂಡನಾಗಿ ಬೆಳಗಿ ಬೆಳಕ ಕಂಡ ||

ವೀರಶೈವ ಧರ್ಮದ ಅಸ್ತಿತ್ವವ ಬಯಸಿದ
ವೀರಶೈವ ಮಹಾಸಭೆಯು ಸಂಸ್ಥಾಪನ ಗೈದ
ವಿಜಯಮಹಾಂತೇಶನ ಹಾವೇರಿ ಯೋಗಿಯು
ಸಹಕಾರದಿ ಶಿವಯೋಗಮಂದಿರವ ಕಟ್ಟಿದ
ಕಲ್ಲು ಕಂಟಿ ದೇವರೆಂದು ಪೂಜಿಸುವ ಭಕ್ತರಿಗೆ
ಮಾತಾಡುವ ದೇವರನ್ನು ಸೃಷ್ಠಿ ಮಾಡಿದ ||

ಎಲ್ಲರಂತೆ ಜನಿಸಿದ ಎಲ್ಲರಂತೆ ತಾ ಬೆಳೆದ
ಎಲ್ಲರಿಗಾದರ್ಶವಾದ ತುಂಬು ಬಾಳು ಬಾಳಿದ
ಎಲ್ಲ ಧರ್ಮದಣುಗರಿಗೆ ಬೆಲ್ಲದ ಅಚ್ಚಾದ
ಸಂಗೀತಾದಿ ಲಲಿತ ಕಲಾ ರಂಗಗಳ ಉದ್ಧರಿಸಿದ
ಶೂನ್ಯಸಂಪದದ ಶ್ರೀಮಂತನಾಗಿ ಮೆರೆದ
ಅಲ್ಲಮನೆಂದು ಹೆಸರಾಗಿ ಶೂನ್ಯದಲ್ಲಿ ಬೆರೆದ || ○

# ಶ್ರೀಶೈಲ ಮಲ್ಲಯ್ಯ

ರಾಗ:-ತಿಲಕ್ಕಲಾ ತಾಲ:-ಕೆಹರವಾ

ಮಲ್ಲಯ್ಯಾ s s s s s s s s s s
ಶ್ರೀಗಿರಿ ಮಲ್ಲಯ್ಯ s s s s s s s s
ಎಲ್ಲಲ್ಲಿ ನೆಲಸಿ । ಎಲ್ಲರನು ಹರಸಿ । ಜಗ
ವೆಲ್ಲ ತುಂಬಿ ನಿಂತಾನ ಮಲ್ಲಯ್ಯ ಶ್ರೀಗಿರಿಮಲ್ಲಯ್ಯ
ಮಲ್ಲಯ್ಯ ಪರುವತ ಮಲ್ಲಯ್ಯ ||
ಒಂದೆ ರೂಪ । ಸಾವಿರ ರೂಪ
ಸೂರ್ಯನ ಹಾಂಗ ಕೋಟಿ ಪ್ರತಾಪ
ಅಲ್ಲಿ ಇಲ್ಲಿ ಇಲ್ಲಿ ಅಲ್ಲಿ ಸುತ್ತ ಎಲ್ಲ ಕಡೆಯಲ್ಲಿ
ನಮ್ಮ ಮಲ್ಲಯ್ಯ ತುಂಬ್ಯಾನ । ಕೋಟಿ ಕೋಟಿ ಹೆಸರಾಗ್ಯಾನ
ಸೂರ್ಯನ ತಾತ । ಸೂರ್ಯಗತೀತ
ಎಂಬೊ ಸಾಕ್ಷಿ ತೋರ್ಯಾನ । ಸೂರ್ಯಸಿಂಹಾಸನೇರ್ಯಾನ
ಸೂರ್ಯಸಿಂಹಾಸನಾಧೀಶನಾಗಿಂದು ಮುಂದೆಂದು ಮೆರಿತಾನ
ಮಲ್ಲಯ್ಯ ಮಲ್ಲಯ್ಯ ಶ್ರೀಶೈಲಮಲ್ಲಯ್ಯ||
ಮಲ್ಲ ಮಲ್ಲ ಗಿರಿ ಮಲ್ಲ ಮಲ್ಲ ಸುರಮಲ್ಲಮಲ್ಲ ಗುರುಮಲ್ಲ
ಮಲ್ಲ ಮಲ್ಲ ತೃಣಮಲ್ಲ ಮಲ್ಲ ಜೆನಮಲ್ಲ ಮಲ್ಲ ಪ್ರಭುಮಲ್ಲ
ನಾನಾತರದ ಹೆಸರಿನಲಿ । ನಾನಾತರದ ದೇಶದಲಿ
ಕುರುಹನ್ನು ತೋರಿ । ಅರುಹನ್ನು ಬೀರಿ । ಗುರು
ವಾಗಿ ಹರಸುವ ರೂಪಗಳು
ಗಿರಿಮಲ್ಲನ ನಿಜರೂಪಗಳು
ಗುರುಮಲ್ಲನ ಪ್ರತಿರೂಪಗಳು
ಅಂಥಾ ಬೆಳಗೊಂದು ನಮ್ಮೂರ ಗುರುಮಠದಲ್ಲಂದು ಬೆಳಗಿತು
ಗುರುಸ್ಥಲ ಚರಿತವ ಬೆಳಗಿಸಿತು । ಶ್ರೀಮಲ್ಲಿಕಾರ್ಜುನೆಂದ್ಹೆಸರಾಯ್ತು
ಅಲ್ಲಿ ಇಲ್ಲಿ ಇಲ್ಲಿ ಅಲ್ಲಿ ಸುತ್ತ ಎಲ್ಲ ಕಡೆಯಲ್ಲಿ

ನಮ್ಮ ಮಲ್ಲಯ್ಯ ತುಂಬ್ಯಾನ । ಕೋಟಿ ಕೋಟಿ ಹೆಸರಾಗ್ಯಾನ
ವಿದ್ಯದ ನಾಥ । ಪಂಡಿತ ಶ್ರೇಷ್ಠ
ಎಂಬೋ ಕುರುಹು ತೋರ್ಯಾನ ಪಂಡಿತರಿಗೆ ಗುರುವಾಗ್ಯಾನ
ಪಂಡಿತಾರಾಧ್ಯ ನಾಮದಿಂದ ಶತ ಶತಮಾನದೆ ತಾ ಮೆರಿತಾನ
ಮಲ್ಲಯ್ಯ ಽ ಽ ಽ ಮಲ್ಲಯ್ಯ ಽ ಽ ಽ
ಮಲ್ಲಯ್ಯ ಮಲ್ಲಯ್ಯ ಶ್ರೀಶೈಲಮಲ್ಲಯ್ಯ ॥ ○

## ಎಲ್ಲೆಲ್ಲಿ ನೀನಿರುವೆ

ರಾಗ:-ಭೈರವಿ ತಾಲ:-ದಾದರಾ

ಎಲ್ಲೆಲ್ಲಿ ನೀನಿರುವೆ ಸಂತ । ಜಗವೆಲ್ಲ ತುಂಬಿಹೆ ಭಗವಂತ
ಚಿತ್ತರಗಿಯ ಗುರುಮಹಾಂತ । ಇಲಕಲ್ಲದ ವಿಜಯಮಹಾಂತ ॥

ಪೃಥ್ವಿ ಕಪ್ಪಿನಲ್ಲಿ ನಿನ್ನ ರೂಪು ಒಪ್ಪಾಗಿದೆ
ಜಲದ ಚಲನೆಯಲ್ಲಿ ನಿನ್ನ ನಿಜದ ನೆಲೆಯೋಡಾಡುತಿದೆ
ಗಾಳಿಸುತ್ತಿನಲ್ಲಿ ನೀ ಶೂನ್ಯದುಂಗುರವಾಗಿರುವೆ
ಅಗ್ನಿ ಪ್ರಖರದಲ್ಲಿ ನಿನ್ನ ತಪದ ತೇಜಸ್ಸಿದೆ
ಮಹಾಂತ । ಶಿವಸಂತ । ವಿಶ್ವವನ್ನೆ ತುಂಬಿನಿಂತ ಭಗವಂತ ॥

ತರುಲತೆ ಬೆಳೆಸಿರಿಗಳಲಿ ನಿನ್ನ ತನು ತುಳುಕುತಿದೆ
ಹಸಿರೆಲೆ ಎಳೆಚಿಗುರಿನಲಿ ನಿನ್ನಸುವೆ ಚಲಿಸುತಿದೆ
ಫಲ ರಾಶಿ ಶಿಹಿ ಸೂಸಿ ನಿನ್ನ ಇರವು ತೋರುತಿದೆ
ಪುಷ್ಪ ರಾಶಿ ಗಂಧ ನಿನ್ನ ಗುಣಗಂಧ ಸೂಸುತಿದೆ
ಮಹಾಂತ । ಶಿವಸಂತ । ವಿಶ್ವವನ್ನೆ ತುಂಬಿನಿಂತ ಭಗವಂತ ॥

ಮಳೆಯ ಜಲದ ಬಿಂದುವಿನಲಿ ನಿನ್ನಕಳೆ ಲಿಂಗವಾಗಿದೆ
ರವಿ ಶಶಿ ತಾರೆಗಳು ನಿನ್ನ ಚರಪ್ರಭೆಯ ಬೀರುತಿವೆ
ಪಂಚ ಭೂತಗಳಲಿ ನಿನ್ನ ಲಿಂಗದೇಹ ಮಂಡಿಸಿದೆ
ಸಕಲ ಚರಾಚರಗಳು ನಿನ್ನ ಅಸ್ತಿತ್ವವ ಸಾರುತಿವೆ
ಮಹಾಂತ । ಶಿವಸಂತ । ವಿಶ್ವವೆಲ್ಲ ತುಂಬಿನಿಂತ ಭಗವಂತ ॥



# ಜಗದೇಕ ಗುರು

ರಾಗ:- ಹಂಸಧ್ವನಿ ತಾಲ:- ತೀನತಾಲ

ಜಗದೇಕ ಗುರು ರೇಣುಕ
ಬಾಳೆಹೊನ್ನೂರು ಪೀಠಾಧಿನಾಯಕ ॥
ಶಿವಧರ್ಮ ಸ್ಥಾಪಕ । ಶಿವಸತ್ವ ಚಾಲಕ
ಶಿವ ತತ್ವ ನಾಯಕ । ಶ್ರೀ ರೇಣುಕ ॥

ಶ್ರಿಂಗೇರಿ ಪೀಠದ ಆದಿ ನಾಯಕನಾದ
ಆಚಾರ್ಯ ಶಂಕರರ ನುಡಿ ಕೇಳಿದಾತ
ಚಂದ್ರ ಮೌಳೀಶ್ವರ ಲಿಂಗವಗೆ ನೀಡುತ
ಶಿವಾಧಿಕ್ಯವಂ ಬೋಧಿಸಿದಾತ
ಶಿವಾದ್ವೈತ ಮತ ಪ್ರವರ್ತಕ
ಶಕ್ತಿವಿಶಿಷ್ಟದ್ವೈತ ಬೋಧಕ
ಗುರುವಿನ ಗುರು ಜಗದ್ಗುರು ರೇಣುಕ
ಆಚಾರ್ಯಕುಲ ಮೂಲ ಪ್ರದೀಪಕ ॥

ಲಂಕಾಧಿಪ ವಿಭೀಷಣಗೊಲಿದಾತ
ಮುಕ್ಕೋಟಿ ಲಿಂಗಗಳ ಸ್ಥಾಪಿಸಿದಾತ
ಅಗಸ್ತ್ಯ ಮುನಿಯಿಂ ಸೇವೆ ಕೊಂಡಾತ
ವೀರಶೈವ ಸಿದ್ಧಾಂತವ ಪೇಳಿದಾತ
ಯುಗ ಯುಗ ಯುಗದೊಳು ಅವತರಿಸುತ
ಶಿವ ಮತವನು ಸ್ಥಿರಗೊಳಿಸುತ
ಮೆರೆದಾತ ಮೆರೆವಾತ ಶ್ರೀಗುರು ರೇಣುಕ
ಗುರುಸ್ಥಲದ ಆದಿ ಗುರುನಾಯಕ ॥ ೦

# ಆಚಾರ್ಯರಿಗೆ ಶರಣಾರ್ಥಿ

ರಾಗಃ- ಅಹೇರ ಭೈರವ ತಾಲಃ-ದಾದರಾ

ಶರಣಾರ್ಥಿ । ಶರಣು ಶರಣಾರ್ಥಿ
ವೀರಶೈವ ಧರ್ಮ ಸಂಸ್ಥಾಪನಾಚಾರ್ಯರಿಗೆ ॥

ಕೊಲ್ಲಿಪಾಕಿ ಲಿಂಗದಲಿ । ಸಲ್ಲೀಲೆಯಿಂದಲಿ
ಈ ಇಳೆಗೆ ಬೆಳಕಾದ ಶ್ರೀರೇಣುಕಾಚಾರ್ಯ
ಅಂದಂದು ರೂಪದಲಿ । ಇಂದೊಂದು ರೂಪದಲಿ
ತೋರಿ ಮೆರೆಯುತಿರುವಂಥ ಶ್ರೀಪ್ರಸನ್ನ ರೇಣುಕ
ಶ್ರೀಮದ್ರಂಭಾಪುರಿ ಜಗದ್ಗುರು ಸಾರ್ವಭೌಮಗೆ ॥

ವಟಕ್ಷೇತ್ರ ಲಿಂಗದಲಿ । ಪ್ರಕಟಗೊಂಡ ಭುವಿಯಲಿ
ಈ ಮರ್ತ್ಯಕೆ ಗುರುವಾದ ಶ್ರೀದಾರುಕಾಚಾರ್ಯ
ಯುಗ ಯುಗದಲಿ ಅವತರಿಸಿ । ಉಜ್ಜೈನಿಪೀಠದೊಡೆಯನಾಗಿ
ಸದ್ಧರ್ಮ ಸಿಂಹಾಸನಾಧೀಶನಾಗಿ ಮೆರೆಯುವ
ಮರುಳಸಿದ್ಧೇಶ್ವರ ಜಗದ್ಗುರು ಜಾಗ್ರುತ ಸನ್ನಿಧಿಗೆ ॥

ಶತಶತಶತಮಾನದಿ । ಕೇದಾರ । ಏಕೋರಾಮಲಿಂಗದಿ
ಸೃಷ್ಟಿಗಿಳಿದು ಸುವಿರಾಗದ ಘಂಟಾನಾದವ ಮಾಡಿದ
ಅಂದೊಂದು ಬೆಳಗಿನಲಿ । ಇಂದೊಂದು ಬೆಳಗಿನಲಿ
ಬೆಳಗಿ ಬೆಳಗುವಾ ಹಿಮವತ್ ಕೇದಾರ ಪೀಠದ
ಜಗದಾದಿ ಜಗದ್ಗುರು ಮಹಾಶಿವಾಚಾರ್ಯ ಪ್ರಭುವಿಗೆ ॥

ಸುಕ್ಷೇತ್ರ ಶ್ರೀಶೈಲದಿ । ಮಲ್ಲಿಕಾರ್ಜುನ ಲಿಂಗದಿ
ಅವತರಿಸುತ ವೀರಶೈವ ಬೆಳಗಿಸಿದಾಚಾರ್ಯ
ಮಲ್ಲಯ್ಯ ಶ್ರೀಗಿರೀಶ । ಪಂಡಿತಾರ್ಯ ವಾಗೀಶ
ಉಮಾಪತಿ ಶಿವ ಪರಮೇಶ ಸತತಬೆಳಗುತಿರುವಂಥ
ಪೂಜ್ಯಪಾದ ಶ್ರೀಶೈಲ ಜಗದ್ಗುರು ಮಹಾಸನ್ನಿಧಿಗೆ ॥

ವಿಶ್ವರಚನೆಯಂ ಮಾಡಿ । ವಿಶ್ವದಾದಿಯಲಿ ಉದಿಸಿ
ವಿಶ್ವದ ವಿಶ್ವಾತ್ಮರಿಗೆ ಶ್ರೀ ಗುರುವಾದ ವಿಶ್ವೇಶ

ವಿಶ್ವ ಚಲಡಿ ಇರುವನಕ । ಕಾಶೀ ಪೀಠದಿ ಇರುತ
ವೀರಶೈವ ವಿಶ್ವಧರ್ಮವೆಂಬ ಸತ್ಯ ಸಾರುತಿರುವ
ಶ್ರೀಮತ್ ಕಾಶೀ ಜಗದ್ಗುರುಸ್ವಾಮಿ ಪ್ರಭುವಿಗೆ ॥ ೦

## ತು ತು ಆ ಟ

ರಾಗಃ=ಮಿಶ್ರಭೈರವ ತಾಲ:=ಕೆಹರವಾ

ಹಿಡಿ ತು ತು ತು ತು ತು ತು ತು ತು ತು ತು
ಹೊಡಿ ತು ತು ತು ತು ತು ತು ತು ತು ತು ತು
ತುತು ಆಟ । ಆಡು ಜಾಣ
ಜಗವೆಂಬುದೊಂದು ತುತು ಆಟದ ಕಣ ।ಈ।
ತಿಳಿದು ಆಡುವವನೆ ಜಾಣ । ಆಡಿ ಗೆಲುವವನೆ ಬಲುಜಾಣ ॥
ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯ । ಅದು ಒಂದುಬಣ
ನ್ಯಾಯ ನೀತಿ ಧರ್ಮಾಚಾರ ಸದ್ವಿಚಾರ । ಇನ್ನೊಂದು ಬಣ
ಆ ಬಣಕೆ ಈ ಬಣ ವೈರಿ
ಈ ಬಣಗ ಆ ಬಣ ವೈರಿ
ಒಂದಕ್ಕೊಂದು ಏರಿ ಏರಿ ಏರಿ ಏರಿ
ಹೊಡಿಯಲು ಹವಣಿಸುತಿಹವರಿ
ಸುರುವಾಯಿತು ತುತು ಆಟ
ಸುರುವಾಗಿದೆ ತುತು ಆಟ ॥
ಮನಸಿನ ಪಂಗಡ ಕಾಮಾಧಿಗಳ ಬಲೆಗೆ । ಬೀಳದೆ ನೀನು
ಮಧ್ಯದ ರೇಖೆಯು ಅದು ನಿಜ ಶ್ರೀಮುಕ್ತಿ । ಮುಟ್ಟಲುಬೇಕು
ಮುಟ್ಟೋತನಕ ಉಸಿರಿರಬೇಕು
ಬಾಯಲಿ ತುತು ಉಸಿರಿರಬೇಕು
ತುತು ಅದುವೆ ಆ ದೇವಧ್ಯಾನವು
ಒಳಗ್ಹೊರಗೊಂದಾಗಿರಬೇಕು
ಅಂದರೆ ಜೀವನೆ ಗೆದ್ದಂತೆ
ವಿಜಯ ಮಹಾಂತ ಶಿವ ನೀನಂತೆ !! ೦

# ಅನುದಿನ ಭಜಿಸಲುಬೇಕು

ರಾಗಃ-ಕಾಫಿ ತಾಲಃ - ದಾದರಾ

ಅನುದಿನ ಭಜಿಸಲುಬೇಕು ಎಂಥವನ
ದಿನ ದಿನ ಎಜಿಸಲುಬೇಕು ಇಂಥವನ
ಆದಿ ಕಳೆದವನ | ಅಂತ್ಯವಿರದವನ | ಮಹಾಂತಾದವನ ||

ವೀರಶೈವ ಧರ್ಮ ಸಂಸ್ಥಾಪಕ ತಾನಾಗಿ
ರಂಭಾಪುರಿ ಪೀಠದಾಚಾರ್ಯನಾಗಿ
ಗುರುಸ್ಥಲದ ಸಂಚ್ಚಾಲಕನಾಗಿ
ಯುಗ ಯುಗದಲಿ ಅವತರಿಸುತ ಗುರುವಾಗಿ ಮೆರೆವವನ
ಗುರುವಿನ ಗುರುವಾದವನ | ರೇಣುಕಜಗದ್ಗುರುವಿನ
ನೆನೆಯುಬೇಕು ನಿತ್ಯ ನೆನೆಯುಬೇಕು
ನೆನೆದಂತೆ ಮನನಮಾಡಿಕೊಂಡಿರಬೇಕು
ಶ್ರೀಪ್ರಸನ್ನ ರೇಣುಕಾರ್ಯನಂತಾಗಬೇಕು ||

ವಿಶ್ವವೆ ನನ್ನ ನಿಜವಾದ ಮನೆಯು
ವಿಶ್ವದೆಲ್ಲ ಜೀವಿಗಳು ನನ್ನ ಮಕ್ಕಳು
ಎನುವ ವಿಶ್ವ ಕೌಟುಂಬಿಯಾಗಿ
ಸಕಲ ಜೀವಾತ್ಮರಿಗೆ ಲೇಸ ಬಯಸಿದಂತವನ
ವಿಶ್ವಾತ್ಮ ಗುರುವಿನ | ಹಾನಗಲ್ಲ ಕುಮಾರನ
ನೆನೆಯುಬೇಕು ನಿತ್ಯ ನೆನೆಯುಬೇಕು
ನೆನೆದಂತೆ ಮನನ ಮಾಡಿಕೊಂಡಿರಬೇಕು
ಹಾನಗಲ್ಲ ಗುರುಕುಮಾರನಂತಾಗಬೇಕು ||

ಬೃತ್ಯಾಚಾರದ ಜೀವಾಳವಾಗಿ
ಶರಣ ತತ್ವ ಸಂಸ್ಮರಣದ ಕಿರಣವಾಗಿ
ದ್ವಿತಿಯ ಬಸವನೆಂಬ ಖ್ಯಾತಿ ಗಳಿಸಿ
ಕಲಬುರಗಿ ಕೈಲಾಸ ಗೈದ ಭುವಿಯ ನಿಜಶಿವನ
ಬೇಡಿದ ವರ ಕೊಡುವವನ । ಶ್ರೀಶರಣಬಸವನ
ನೆನೆಯಬೇಕು ನಿತ್ಯ ನೆನೆಯಬೇಕು
ನೆನೆದಂತೆ ಮನನ ಮಾಡಿಕೊಂಡಿರಬೇಕು
ಕಲಬುರಗಿಯ ಶರಣಬಸವನಂತಾಗಬೇಕು ॥

ಕಲ್ಲುಬೆಟ್ಟದಂತಿದ್ದ ಭವಕೆ ಲಿಂಗಗತಿ ಕೊಡಿಸಿ
ಕಲ್ಲುಚಿತ್ತದವರ ಚಿತ್ತರಗಿದಾಪ್ತರ ಮಾಡಿ
ಇಲಕಲ್ಲ ಇಲ್ಲ ಕಲ್ಲನೆನಿಸಿ
ಇಲ್ಲಿ ಕಳಾವನ್ನುತ ಇಲಕಲ್ಲದಿ ಪೂರ್ಣಾದವನ
ಜಗದ್ಭರಿತ ಜಂಗಮನ । ವಿಜಯಮಹಾಂತೇಶನ
ನೆನೆಯಬೇಕು ನಿತ್ಯ ನೆನೆಯಬೇಕು
ನೆನೆದಂತೆ ಮನನ ಮಾಡಿಕೊಂಡಿರಬೇಕು
ಇಲಕಲ್‌ಚಿತ್ತರಗಿ ಮಹಾಂತನಂತಾಗಬೇಕು ॥

ವಿರತ ಸ್ಥಲದ ಧವಲ ಕೀರ್ತಿ ತಾನಾಗಿ
ಶೂನ್ಯ ಸಂಪಾದನೆಯ ಶ್ರೀಮಂತನಾಗಿ
ಶಿವಯೊಗ ಸಾಮ್ರಾಜ್ಞನಾಗಿ
ಲಿಂಗಕೆ ತನ್ನಂಗ ಎಡೆಯ ಮಾಡಿಕೊಂಡವನ
ನಿಜ ಎಡೆಯೂರೇಶನ । ಗುರುಸಿದ್ಧಲಿಂಗನ
ನೆನೆಯಬೇಕು ನಿತ್ಯ ನೆನೆಯಬೇಕು
ನೆನೆದಂತೆ ಮನನ ಮಾಕೊಂಡಿರಬೇಕು
ಜಗದ್ಗುರು ಶ್ರೀತೋಂಟದಾರ್ಯನಂತಾಗಬೇಕು ೦

# ಊರು

ರಾಗ:-ಪಹಾಡಿ ತಾಲ:-ದಾದರಾ

ಊರು । ಈ ಊರು। ಇದು ಯಾವೂರು ?
ಈ ಊರು । ದೇಹವಿದು ನಿಜವಾದ ಊರು ।
ನಮ್ಮೂರು । ಇದು ನಿಮ್ಮೂರು । ಎಲ್ಲ ಜೀವರೂರು॥

ಊರು । ಇಲ್ಲಿ ಊರು । ದೇಹದೂರಿನಲ್ಲಿ ಭಕ್ತಿಯೂರು
ಭಕ್ತಿ ಅಂಗದಲ್ಲಿ ನೀನೂರಲು । ತತ್ವತುಂಗೆ ಗಾನಗಂಗೆ ಇಲ್ಲಿ ಹರಿವುದು
ಆಗಿದು ಉತ್ತುಂಗ ಶಿವ ತೆಂಗಾಯಿಯು ।
ಹೃದ್ದೇವಗೆ ಮುಡುಪಾಗಿ ಎಡೆಯಾಗಬೇಕು
ಈ ಕಾಯ ಲಿಂಗದೇವಗೆಡೆಯಾಗುವ ಊರು
ಒಡೆದು ಎಡೆಯಾಗುವ ನಿಜದೆ ಯಡೆಯೂರು ॥

ಈ ಶರೀರವೆಂಬ ನಿಜದೆಡೆಯೂರೊಳು
ಇರುವನೊಬ್ಬ ಆತ್ಮ । ಅದು ಸದ್ಧಾತ್ಮ । ಅದು ಪರಮಾತ್ಮ
ಅದು ಸಿದ್ಧವಾದ ಲಿಂಗ । ಅದು ಲಿಂಗವಾದ ಸಿದ್ಧ
ಸಿದ್ಧಲಿಂಗ ಶಿವನಿದ್ದ ಊರು । ಸತ್ಯಸತ್ಯದೆ ಇದೆ ಯಡೆಯೂರು॥
ಯಡೆಯೂರು ನನ್ನದೆಂದು ಮೆರೆಯುವದು ಕರಿನಾಡು
ಕರಿನಾಡು ನನ್ನದೆಂದು ತಣಿಯುವದು ಯಡೆಯೂರು
ಕಪ್ಪುಳ್ಳ ನೆಲ ಜಲವು । ಒಪ್ಪುಳ್ಳ ಈ ಜಗವು
ಕಪ್ಪುಬಣ್ಣದೀ ವಿಶ್ವ ನಿಜವಾಗಿ ಕರಿನಾಡು
ಜಗದ ಜೀವಿಗಳ ದೇಹ ನಿಜವಾಗಿ ಎಡೆಯೂರು
ಸರ್ವ ಜೀವಾಂತರಾತ್ಮ ಸಿದ್ಧಲಿಂಗದೇವರು
ಅಂತಾದುದಾಗಿ ಈ ಕಾಯ । ಸಿದ್ಧಲಿಂಗೇಶ್ವರನ ದೇವಾಲಯ
ಇಂತಾದುದಾಗಿ ಈ ಶರೀರವು । ಸಿದ್ಧಲಿಂಗನೂರು ಎಡೆಯೂರು ॥



# ಆರು ಇವರಾರು ?

ರಾಗ:– ಶಹನಾ ತಾಲ:– ದಾದರಾ

ಆರು । ಇವರಾರು
ಅರಿತವರಾರು । ನಿಜ ಅರಿತವರಾರು ?
ನಾನಾರು । ನೀನಾರು
ಎಂಬರಿವನು ಕೊಟ್ಟ ಜಗದ್ಗುರುವರರು ।
ನನ್ನೆದೆಗೆ । ನಿಮ್ಮೆದೆಗೆ
ಲಿಂಗದೇವರನಿತ್ತ ಶ್ರೀಶಿವಾಚಾರ್ಯರುಗಳು ॥

ಹಸಿರು ಕ್ರಾಂತಿ ಒಕ್ಕಲಿಗನ ಮಹಾಮಂತ್ರ
ಆ ಮಂತ್ರದಲ್ಲಿ ಜಗವು ಬದುಕಿದೆ ಅವಿಶ್ರಾಂತ
ಹಸಿರು ವರ್ಣ ಜೀವ ಜೀವನ ಜಗದ ಉಸಿರು
ಸೃಷ್ಟಿಯು ಹೊಸತಾಗುವಂತಿರಿಸಿದೆ ಈ ಹಸಿರು
ಹಸಿರು ಕ್ರಾಂತಿಗೊಡೆಯರು ಜಗದ್ಗುರು ರೇಣುಕರು
ಅಂತೆ ಬಾಳೆಹಳ್ಳಿಪೀಠಧ್ವಜದ ವರ್ಣ ಹಸಿರು
ಹಸಿರಿತ್ತು ಬಾಳು ಹೆಸರಾಗುವಂತೆ ಮಾಡುವವರು
ಶ್ರೀಮದ್‌ರಂಭಾಪುರಿ ಜಗದ್ಗುರು ಭಗತ್ಪಾದರು ಇವರು ॥

ಹಸಿರುಂಡು ಬೆಳೆದ ರಕ್ತ ವರ್ಣವು ಕೆಂಪು
ಕೆಂಪಿನಲ್ಲಿ ಜೀವರಾಶಿ ಜಗವಹುದು ಕಂಪು
ಆ ಕಂಪಿನಲ್ಲಿ ರಕ್ತ ವಿರಕ್ತಿಗಳ ಅನುಕಂಪು
ರಕ್ತಿ ಧರ್ಮ ಕೆಂಪು; ವಿರಕ್ತಿ ಧರ್ಮ ಕೆಂಪು
ಅಂತೆ ಗುರು-ಸ್ವಾಮಿಗಳ ಕಫನಿ ಲುಂಗಿ ಕೆಂಪು
ಕೆಂಪು ಕ್ರಾಂತಿಗೊಡೆಯರು ಜಗದ್ಗುರು ದಾರುಕರು
ಅಂತೆ ಉಜ್ಜಯಿನಿ ಪೀಠಧ್ವಜವು ಕೆಂಪಿರುವದು
ಕೆಂಪಿತ್ತು ಜಗವ ಸದ್ಧರ್ಮದಿ ಪಾಲಿಸುವವರು
ಶ್ರೀಮದ್ ಉಜ್ಜಯಿನಿ ಜಗದ್ಗುರು ಭಗವತ್ಪಾದರು ಇವರು ॥

ಹಸಿರು ಕೆಂಪುಗಳಿಗೆ ಸನಿಹ ಹಳದಿ ವರ್ಣವು
ಹಳದಿಯಾದ ಬದುಕು ಸುಜ್ಞಾನದಾಗರವು
ಬೆಳೆ ಹಸಿರು; ಫಲ ಕೆಂಪು; ಅದರ ಬೆಸುಗೆ ರಸಗಂಧ
ಫಲಕೆ ಮೂಲ ಪುಷ್ಪವದಕೆ ಮೂಲ ಮಕರಂದ
ಆ ಗಂಧ ಹಳದಿ ಶಿವನ ಸೌಗಂಧ ಹಳದಿ
ಆ ಹಳದಿ ವರ್ಣದಿಂ ಫಲರಾಶಿ ಸಮೃದ್ಧಿ ||

ಬದುಕು ಬೆಳಕಾಗುವದಕೆ ಮೂಲ ಸುಜ್ಞಾನವು
ರಕ್ತಿಗೆ ಸುವಿರಕ್ತಿ ಬರಲದುವೆ ಜ್ಞಾನಸಿದ್ಧಿಯು
ಶಿವಜ್ಞಾನ ಸಂಕೇತ ಹಳದಿ ವರ್ಣ ಧ್ವಜವು
ಹಳದಿ ವರ್ಣದೊಡೆತನವು ಕಾಶಿ ಪೀಠದ್ದು
ಜಗಕೆ ಹಳದಿ ಇತ್ತು ಸುಜ್ಞಾನದಿ ಜಗವ ಕಾಯುವರು
ಶ್ರೀಮತ್‌ಕಾಶಿ ಜಗದ್ಗುರು ಭಗವತ್ಪಾದರು ಇವರು ||

ಜಗದ ಹಸಿರು ಕೆಂಪು ಹಳದಿ ವರ್ಣ ಕ್ರಾಂತಿಗೆ
ನಿರುತ ಜಗವ ಬೆಳಗುವಂಥೆ ಸೂರ್ಯ ಕಾರಣಲ್ಲವೆ?
ಎಲ್ಲ ವರ್ಣಾಂತರಂಗ ಕ್ರಾಂತಿಗಳ ಇರವು
ಪಾಂಡಿತ್ಯದ ಪ್ರಭೆಯಲ್ಲಿ ಅರಿವಾಗಿ ತೋರುವವು
ಆ ಅರಿವಿನ ಕುರುಹು ಮಹಾ ತವರು ಬಿಳಿ ಬಣ್ಣವು
ಬಿಳಿ ಬಣ್ಣದ ಲೀಲೆಯೆ ಸೂರ್ಯಾದಿ ಶಶಿ ತಾರೆಗಳು
ಅವುಗಳಿಂದ ಜಗವು ಬೆಳಗಿ ಬಾಳಿ ಬೆಳಕಾಗಿಹುದು
ಜಗ ಬೆಳಗುವ ಬೆಳಕನ್ನು ಶ್ರೀಶೈಲ ಪೀಠ ಹರಸಿಹುದು ||

ಶ್ರೀಶೈಲದ ಸೂರ್ಯ ಪೀಠ ಪ್ರಭೆಯಿಂದ ಜಗ ಬೆಳೆಯು
ಬರುವದು ಬೆಳ್ಪಳ್ಳಿ ಕೊಡುಗೆ ಫಲ ರಾಶಿ ರತುನಗಳು
ಅದರ ಸಂಕೇತ ಶ್ರೀಗಿರಿಯು ಪೀಠಧ್ವಜ ಬಿಳಿದು
ಬಿಳಿ ಬಣ್ಣದ ಒಡೆತನವು ಶ್ರೀಶೈಲ ಪೀಠದ್ದು
ಜಗಕೆ ಬೆಳಕಿತ್ತು ಪಾಂಡಿತ್ಯದಿ ಜಗ ಪೊರೆಯುವರು
ಶ್ರೀಮತ್ ಶ್ರೀಶೈಲ ಜಗದ್ಗುರು ಭಗವತ್ಪಾದರು ಇವರು ||

ಎಲ್ಲ ಬಣ್ಣಗಳ ಕೂಟ ಬಿಳಿಬಣ್ಣವಾದರೂ
ಆ ಎಲ್ಲ ಬಣ್ಣವೈಕ್ಯ ನನ್ನಲೆನ್ನುವದು ಕಪ್ಪು ವರ್ಣವು
ಎಲ್ಲ ವರ್ಣಕ್ರಾಂತಿಗೆ ಒಪ್ಪಿಟ್ಟ ಬಣ್ಣವಿದು
ಶಿವನು, ಶಿವನ ಲಿಂಗ ಮಧ್ಯ ಜಗಪಿಡೆಲ್ಲ ಕಪ್ಪು
ಕಪ್ಪುಳ್ಳ ರಾತ್ರಿಯಿಂದೆ ಹಗಲಿಗೆ ಬೆಲೆಬಂದಿದೆ
ಹಗಲು ರಾತ್ರಿಗಳು ಶಿವನ ಸೃಷ್ಟಿಗೆ ಕಳೆ ತಂದಿವೆ
ನಾ ಹೆಚ್ಚು ನೀ ಹೆಚ್ಚು ಎಂಬ ಭೇದವಿಲ್ಲ ಗುರುಸ್ಥಲದೆ
ಎಂಬ ಸಂದೇಶದಲ್ಲಿ ಕೇದಾರ ಪೀಠ ಮಧ್ಯದಲ್ಲಿದೆ ||

ವರ್ಣ ತಾರತಮ್ಯವನ್ನಳಿಸುವ ಬಣ್ಣ ಕಪ್ಪು ಬಣ್ಣ
ಕಪ್ಪು ಬಣ್ಣವು ಇದು ವೈರಾಗ್ಯದ ಸಂಕೇತವು
ವೈರಾಗ್ಯ ಪೀಠ ಕೇದಾರ ಜಗದ್ಗುರು ಧ್ವಜವು
ಕಪ್ಪು ವರ್ಣದ್ದು ಅದಕೊಡೆಯರಾಗಿಹರವರು
ಕಪ್ಪಿನಲ್ಲಿ ಜಗವನೊಪ್ಪಿರಿಸಿ ಸಮತೆ ರಕ್ಷಿಪರು
ಶ್ರೀಮತ್ ಕೇದಾರ ಜಗದ್ಗುರು ಭಗವತ್ಪಾದರು ಇವರು ||

೦

## ನೆನೆದರೆ ನೆನೆಯೊಮ್ಮೆ

ರಾಗಃ-ತಿಲಂಗ

ತಾಲ:-ದಾದರಾ

ನೆನೆದರೆ ನೆನೆಯೊಮ್ಮೆ ಗುರುದೇವನ
ಜಗದ್ಗುರುದೇವನ

ನರರೂಪದಿಂದ । ಗುರುವಾಗಿ ಬಂದ
ಧರೆಯ ಪ್ರತ್ಯಕ್ಷ ಪರಮಾತ್ಮನ ||
ಬಾಳೆಲ್ಲ ಹೊನ್ನಾಗಬೇಕು |ಆ|
ಹೊನ್ನ ಬಾಳಿನ ಜೀವ ನೀನಾಗಬೇಕು
ಎನ್ನುವ ಸಂಕೇತದೂರು ಬಾಳೆಹೊನ್ನೂರು ||

ಜಗದ ಜೀವಿಗಳ ಬಾಳು ಹೊನ್ನಾಗಲಿ ।ಆ।
ಜೀವರಿರುವ ತಾಣವೆಲ್ಲ ನನ್ನದಾಗಲಿ
ನನ್ನ ಭಕ್ತ ಮಕ್ಕಳೆಲ್ಲ ಇರುವಂಥ ಹಳ್ಳಿ
ಅದು ನನ್ನ ಹಳ್ಳಿ । ನಿಜ ಬಾಳೇಹಳ್ಳಿ
ಎನುವ ವಿಶ್ವಕೌಟುಂಬಿಯಾಗಿ ಮೆರೆವರೆಲ್ಲಲ್ಲಿ
ಬಾಳೆಹೊನ್ನೂರ ಜಗದ್ಗುರುವರ್ಯರ ನೆನೆಯೋ
ಜೀವನೆ ನಿನ್ನ ಬಾಳೇ ಹೊನ್ನಾಗಿಸಿಕೊಳ್ಳೊ ॥

ನ್ಯಾಯ ನೀತಿಯಿಂದ ಜೀವನಕೆ ಕಾಂತಿ
ಆಕಾಂತಿಗಾಗಿಯೇ ತಿಳಿ ಧರ್ಮ ಸಂಕ್ರಾಂತಿ
ಸತ್ಕ್ರಾಂತಿಯಿಂದ ಈ ವಿಶ್ವಕೆ ಚಿರಶಾಂತಿ
ಚಿರಶಾಂತಿ ವೃದ್ಧಿಯಲಿ ಮುಕ್ತಿ ಸಂಪ್ರಾಪ್ತಿ
ಆಮುಕ್ತಿ ಗಳಿಸಲ್ಕೆ ಜೀವನದ ಕರ್ಮ
ಜೀವ ಕರ್ಮಸಂಪದ ಮೂಲವೆ ಧರ್ಮ
ಅಂಥ ವೀರಶೈವ ಸದ್ಧರ್ಮದ ಪಾಠ
ಕೊಡುತಲಿದೆ ಉಜ್ಜೈನಿ ಜಗದ್ಗುರು ಪೀಠ
ಸದ್ಧರ್ಮ ಪೀಠಾಧೀಶ ಜಗದ್ಗುರುಗಳ ಭಜಿಸೊ
ಜೀವ ನಿನ್ನ ಜೀವನ ಪಾವನವಾಗುವದರಿಯೊ ॥

ಸಾಕಾರಗೊಂಡು ನಿರಾಕಾರಕೇರಬೇಕು
ಭವ್ಯ ಭಾಗ್ಯದಲ್ಲಿ ವೈರಾಗ್ಯ ಗಳಿಸಬೇಕು
ಇದುವೆ ಶಿವ ಧರ್ಮದ ಮಹಾನ್ ಸಂದೇಶ
ಅಂತೆ ಅಮೃತ ಬಿಟ್ಟು ವಿಷವನುಂಡ ಪರಮೇಶ
ಶಿವನ ಸಂದೇಶದ ಪ್ರತ್ಯಕ್ಷ ತಾಣ ರಜತಾದ್ರಿ
ಭುವಿಯ ಕಪ್ಪನುಂಡು ಬೆಳ್ಳಾಗಿದೆ ಆ ಹಿಮಗಿರಿ
ಭುವಿಯ ಭೋಗಕ್ಕೂರತಾಗಿ ವಿರಾಗದಿಂದೊಪ್ಪಿದೆ
ಕೇದಾರ ಜಗದ್ಗುರುವಿನ ಅನುಗಾಲನೆನೆಯೋ
ಭವದ ವಾಸನೆಯ ಕಪ್ಪು ಕಳೆದು ಬೆಳ್ಳಾಗೊ ॥

ಕಲ್ಲಲ್ಲಿ ಕಳೆಯು ಕಾಣುವಾದರ್ಶ ಪಾಠ
ಆ ಪಾಠ ಕೊಡುತಿದೆ ಶ್ರೀ ಶೈಲಪೀಠ
ಅಜ್ಞಾನದಿ ಕಲ್ಲಾದ ಜೀವಂಗಳ ತಿದ್ದಲ್ಕೆ
ಕಲ್ಲಲ್ಲಿ ಕಳೆಗೊಡು ಶಿವ ಬಂದನು ಮರ್ತ್ಯಕೆ
ಅಜ್ಞಾನದ ಕಲ್ಲು ಬಾಳಿಗರಾದಂಥಾ ಜೀವಗಳ್
ಶಿವ ಪಾಂಡಿತ್ಯವಂ ಹರಸುತಿಹರು ಯುಗ ಯುಗದೆ
ಶ್ರೀ ಶೈಲದ ಪಂಡಿತಾರ್ಯ ಜಗದ್ಗುರುವರರು
ಅವರ ನೆನೆದು ನಿನ್ನ ಶೈಲ ಭಾವ ಕಳೆದುಕೊಳ್ಳೊ
ಶಿವ ಪಿದ್ಯೆಯು ಗಳಿಸಿ ನಿಜದೆ ಶ್ರೀಶೈಲ ನೀನಾಗೊ ||

ಜಗದ ಚಲನೆಗೆ ಪರಶಿವನೆ ಕಾರಣ
ಆ ಶಿವನು ಸೃಷ್ಟಿಸಿದನು ಜಗಜೀವನ
ಜಗದ ಜೀವನದೊಂದು ಕಿರಣ ಜೀವ ನೀನು
ಎಂಬರಿವಿನ ಜ್ಞಾನ ಗಂಗೆ ನಿನ್ನಲ್ಲಿ ಹರಿಬೇಕು
ಆ ಜ್ಞಾನ ಗಂಗೆ ಹರಿವ ನಿಜ ಕಾಶಿ ನೀನಾಗು
ವಿಶ್ವೇಶನ ಖಾಸಾ ಭಕ್ತ ನೀನಾಗಿ ಸಾಗು
ಎನ್ನುವ ಶಿವಸಂದೇಶದ ಮಹಾಪಾಠ
ಕೊಡುವದಯ್ಯ ಕಾಶಿಕ್ಷೇತ್ರದ ಜ್ಞಾನಪೀಠ
ಕಾಶಿ ಪೀಠಾಧೀಶ್ವರ ಪರಮ ಜಗದ್ಗುರುವಿನ
ಜೀವನೆ ನೆನೆದು ನೀನಾಗು ಜ್ಞಾನಸಂಪನ್ನ || ○

## ಬಸವಾ ಬಾ ಒಮ್ಮೆ

ರಾಗ:–ಚಾಂದ

ತಾಲ:–ಖವಾಲಿ

ಬಸವಾ ಬಾ ವೊಮ್ಮೆ । ಸಂಗನ ।
ವಸುಧಿಯು ಬೆಳಗು ಬಾ ಇನ್ನೊಮ್ಮೆ ||
ನಿನ್ನ ಬಯಸಿ ಭುವಿ ಬದುಕಿದೆ
ನಿನ್ನ ಬಯಸಿ ಕಾಲ ಓಡುತಿದೆ

ನೀ ಬರಲೆಂದು ಯುಗ ಉರುಳಿತಿದೆ
ನೀ ಬಾ ಎಂದು ಜಗ ತಪಕಸುತಿದೆ ||

ಬಸವ ನಿನ್ನ ಪಾದ ತೊಳೆಯಲು
ಮಳೆ ಬಂದು ಹೊಳೆ ಹಳ್ಳ ಹರಿಯುತಿವೆ
ಬಸವ ನಿನ್ನ ಅರ್ಚನೆಗಾಗಿ
ದಿನ ದಿನ ಹೂ ಪತ್ರಿ ಚಿಗಿತರಳುತಲಿವೆ
ಬಸವಾ ನಿನ್ನ ಅರ್ಪಿತಕಾಗಿ
ಸಸ್ಯಾದಿ ಗಿಡ ಮರ ಬಳ್ಳಿ ಫಲಿಸುತಿವೆ
ಬಸವ ನಿನ್ನ ಒಲುಮೆಗಾಗಿ
ಅಣುರೇಣು ತೃಣ ಕಾಷ್ಟಗಳು ಭಜಿಸುತಿವೆ ||

ಶಿವಶರಣ ಶರಣೆಯರೊಡಗೂಡಿ
ಶರಣಾಗ್ರಣಿ ಬಸವ ಬಾ ಎಂದು ಬೇಡಿ
ವಿರತ ಜಂಗಮ ಸಂಗನ ಸಂಕಲ್ಪದಿ
ಶೂನ್ಯಮೂರುತಿ ನೀ ಬಾಯೆಂದು ಹಾರೈಸಿ
ಕರೆಯುವ ಗೀತ ನನ್ನ ಸಂಗೀತ
ಇದೋ ನಿನಗೆ ಸ್ವಾಗತ ಸುಸ್ವಾಗತ
ಹಾಡುವೆ ಭಕ್ತಿ ಪ್ರಣೀತನಾಗಿ ನಾ
ದಯಮಾಡು ದಯಮಾಡು ಬಸವ ಪುನೀತ || ○

## ಶನಿದೇವ

ರಾಗ:- ಹಂಸಧ್ವನಿ — ತಾಲ:- ತೀನತಾಲ

ಶನಿದೇವ ಶ್ರೀದೇವ ಗ್ರಹರಾಯ । ಶ್ರೀ ।
ನೆನೆವರಿಗಭಯವೀಯುವ ಶುಭಕಾಯ ||
ನೀಲವರ್ಣಮಯ ಶನಿರಾಯ । ಜೀವ ।
ನೀಳ ಮಾಯಾಮಯ ಶ್ರೀಗಾಯ ರಾಯ

ಕಾಲ ಸಹೋದರ ಕರುಣಾಮಯಪ್ರಿಯ ।
ಲೀಲೆಯಿಂ ಪೊರೆವ ಸಕಲೇಷ್ಟಪ್ರದಾಯ ॥

ಭಯಬಿಡಿಸಿ ಭಯಗೆಡಿಪ ಭಯಂಕರಾಕಾರ
ಭವಬಿಡಿಸಿ ಸೊಗಗೊಡುವ ಅಭಯಂಕರಾತ್ಮ
ಬಾಗಿದ ಜನರಾತ್ಮೀಯ ಸಖ್ಯಾತ್ಮ
ಭಜಿಸರ ಕಾಯುವ ನಿಜ ಪರಮಾತ್ಮ ॥

ರವಿಸುತ ಭವಿಪಿತ ಶನಿದೇವ ದೇವ
ಶಿವಪ್ರೀತ ಸುರಖ್ಯಾತ ಶನಿಮಹಾದೇವ
ಜವಭೀತಿ ಅರಿಭೀತಿ ಕಳೆಯುವ ದೇವ
ತವನಿಧಿ ಸಂಪದ ವರವೀವ ದೇವ ॥ ○

## ವಿಶ್ವವಿರಾಡ್ರೂಪ ಬಸವ

ರಾಗ:-ಬೀಮಪ್ಲಾಸ

ತಾಲ:-ತೀನತಾಲ

ವಿಶ್ವವಿರಾಡ್ರೂಪ ಬಸವ
ವಿಶ್ವೇಶ ಪರಮೇಶ ಬಸವ ॥

ಸೃಷ್ಟಿ ಸ್ಥಿತಿಲಯಗಳಲಿ ಬಸವ
ನಿನ್ನಸ್ತಿತ್ವವ ನಾ ಕಾಂಬೆ ಬಸವ ॥

ರವಿಯುದಯದೆ ಬಸವ ತತ್ವೋದಯವದೆ
ಜಗ ಬಾಳಲಿ ಬಸವ ಚೇತನ ಹರಿದಾಡಿದೆ
ಶಶಿ ತಂಪಿನಲಿ ಬಸವ ಅನುಕಂಪವೆಯದೆ
ನಕ್ಷತ್ರ ಮಂಡಲದೆ ಬಸವ ಬಿಂಬಡಗಿದೆ ॥

ಶಿವ ವೃಂದದಲಿ ಬಸವ ಗುಣಬಂಧ ಸ್ಫುರಿಸಿದೆ
ಶರಣ ಸತ್ಸಂಗದಲಿ ಬಸವನ ಆದರ್ಶವದೆ
ನುಡಿನಾಡ ಗುಡಿಯಲಿ ಬಸವ ಮೂರುತಿಯದೆ
ಜಗ ಜನರ ಕಾಯಕದೆ ಬಸವ ಕೀರುತಿಯಿದೆ ॥

ವಸುಧೆಯ ತುಂಬಿದೆ ಬಸವನ ಘನತೆ
ದಶದಿಕ್ಕು ತುಳುಕಿದೆ ಬಸವ ಪಾವನತೆ
ಜನ ಮನದಿ ಹಾಸಿದೆ ಬಸವನ ಚರಿತೆ
ನನ್ನ ಕಂಠದಲ್ಲಿದೆ ಬಸವ ಭಗವದ್ಗೀತೆ ॥ ೦

## ಮಗುವೆ

ರಾಗ:-ಭೀಮಪ್ಲಾಸ ತಾಲ:-ದಾದರಾ

ಮಗುವೆ । ಮುದ್ದು ಮಗುವೆ
ಆಹಾಹಾಹಾ । ಲಲಲಲಲಲ ॥

ತಾಯ್ತುರುಳ ಬಳ್ಳಿಯಲಿ ಅರಳಿದ ಹೂವೆ
ನನ್ನಹೃದಯ ತುಂಬಿರುವ ಸೊಗದ ಸೌಗಂಧವೆ
ಈ ಮನೆಯ ಸತ್ಕೀರ್ತಿಯ ಬೆಳೆಸುವ ಸೌಭಾಗ್ಯವೆ
ಮಗುವೆ । ನೀನೆ । ನಾಳೆ
ನವಭಾರತದ ನಿರ್ಮಾಯಕನು
ದೇಶವನ್ನು ಆಳುವ ಹಿರಿ ನಾಯಕನು ॥

ಜೀವನವೊಂದು ಮುಳ್ಳಿನ ಹಾಸಿಗೆಯೆಂದು
ನೀನಂಜದೆ । ಹಿಂಜರಿಯದೆ । ಹಿಂದುಳಿಯದೆ
ಸಾಗು ನನ್ನ ಮಗುವೆ
ಆಗು ಕನ್ನಡದ ಕಣ್ಮಣಿಯೆ ॥

ಹೂವಿನ ಹಾಸಿಗೆಯು ಈ ಜೀವನ
ಮತ್ತೆ ಮುಳ್ಳಿನ ಹಾಸಿಗೆಯು ಇದೆ ಜೀವನ
ಎಲ್ಲೈತಿ ಮುಳ್ಳು । ಅಲ್ಲೈತಿ ಹೂವು
ಮುಳ್ಳು ಹಿಡಿದು ಹೂವು ಕಾಣಬೇಕು ನೀನು
ಕತ್ತಲ್ಹಿಡಿದು ಬೆಳಕನರಸಬೇಕು ನೀನು
ಬಡತನದಲಿ ಸಿರಿತವ ದುಡಿದು ಜೈಸಬೇಕು
ಕಣ್ಣೀರಲಿ ಕೈಲಾಸ ನೀ ಕಾಣಬೇಕು

ಜಗದ ಅಳುವು ನನಗಿರಲಿ
ನನ್ನ ಸೌಖ್ಯ ಜಗಕಿರಲಿ
ಎಂದೆಂಬ ಕವಿವಾಣಿಯಂತಾಗಬೇಕು
ನೀನಂತಾಗಬೇಕು ॥

ನರರ ನಂಜನುಂಡು । ನಂಜುಂಡನಂತೆ ನಗೆಗೊಂಡು
ಕುಲು ಕುಲು ನಗಬೇಕು । ತಕಥೈ ತಕಥೈ ಕುಣಿಬೇಕು
ಕುಣಿದು ಕುಣಿದು ಕುಣಿದು ಕುಣಿದು ನಡೆದಾಡಬೇಕು
ಲೆಫ್ ರೈಟ್ ಲೆಫ್ ರೈಟ್ । ಇನ್ಕಿಲಾಬ ಜಿಂದಾಬಾದ ರಾ
ಅಬೌ ಟರ್ನ ಲೆಫ್ ರೈಟ್ । ಸ್ಟಾಂಡಸ್ಟೀಜ । ಅಟೆನ್ಸನ್
ಬೋಲೋ ಭಾರತ ಮಾತಾಕಿ ಜೈ ।
ಬೋಲೊ ಕರ್ನಾಟಕ ಮಾತಾಕಿ ಜೈ ॥ ○

## ಶನಿ ಧ್ಯಾನ ಮಾಡಿರೊ

ರಾಗಃ-ಕಾಫಿ ತಾಲಃ-ದಾದ

ಧ್ಯಾನ ಮಾಡಿರೊ । ಶನಿ ಧ್ಯಾನ ಮಾಡಿರೊ
ಧನಧಾನ್ಯ ಸಂಪದ ಶ್ರೀಯು । ಘನಕರುಣೆಯಿಂದೀವ ಶನಿಯ

ನಿಷ್ಠೆಯಿಂದ ಭಜಿಸುವವರ । ಕಷ್ಟ ಕಾಷ್ಟದಂತೆ ಸುಡುವ
ಇಷ್ಟ ತಿಳಿದು ತುಷ್ಟಿಗೊಡುತ । ಶ್ರೇಷ್ಠತೆಯೊಳು ಪೊರೆಯುತ
ತ್ಕೃಷ್ಟ ತೃಪ್ತಿ ಹರಸುವ ಶನಿದೇವನ ಗ್ರುಹರಾಜನ ಗ್ರುಹತೇಜಸ್ಸ
ಕಾಕವಾಹನ ದೇವಚರಿತ । ಶೋಕ ತಾಪ ಕಳೆವ ಪುನೀತ । ಅ
ನೇಕ ಲೀಲಾವತಾರಿಯೆನುತ । ಭಕ್ತಿಯಿಂದ ಭಜಿಸರ । ಮಹ
ದುಃಖವಳಿಸಿ ಸೌಖ್ಯವೀವ ಶನಿದೇವನ ಜಯರಾಜನ ಶ್ರೀ ಪೂಜ್ಯನ

ತಂದೆ ತಾಯಿ ಬಂಧುನೀನು । ಎಂದು ನಂಬಿ ನಿನ್ನ ನೆನೆದು
ಚಂದದಿ ಅನುಷ್ಠಾನಗೈದ । ಯೋಗಿ ವಟು ಗೃಹಸ್ಥರಲ್ಲಿ
ಬಂದು ನೆಲೆದು ಲೀಲೆ ತೋರುವ ಶನಿದೇವನ ಶಿವಪ್ರೀತನ ಶುಭಧಾತನ

ಅಕ್ರಮ ನುಡಿನಿಂದೆಗೈದ । ವಿಕ್ರಮನಿಗೆ ಕಾಡಿ ಪೊರೆದ
ವಕ್ರ ಭಾವದವರಿಗೆ ತಾ । ವಕ್ರವಾಗಿ ಬುದ್ಧಿಗಲಿಸಿ
ಸಕ್ರಮದೋಳ್ ಬಾಳ್ಗಲಿಸುವ ಶನಿದೇವನ ಸುರಭೀಮನ ಸುಖಕಾಮನ ॥

ಹರಿ ಬ್ರಹ್ಮರಿಗಂಜಿಸಿದ । ಗುರುಬುದ್ಧರಿಗೆ ಕಾಡಿಸಿದ
ಪರ ಇಹದ ಸುರಾಸುರರಿಗೆ । ವರಪ್ರಭೆಯನೆ ತೋರಿ ಮೆರೆವ
ಶರಣಾಗತ ಜನರ ಪೊರೆವ ಶನಿದೇವನ ಶ್ರೀ ದೇವನ ಮಹಾದೇವನ ॥

---

## ಕಾನ ಕಾನ ಉತ್ತತ್ತಿ

ರಾಗಃ-ಮಿಶ್ರಪೀಲೂ ತಾಲಃ=ಕೆಹರವಾ

ಕಾನ ಕಾನ ಕಾನ ಕಾನ ಕಾನ ಕಾನ ಕಾನ ಕಾನ ಉತ್ತತ್ತಿ
ಕಾಣ ಕಾಣ ಕಾಣ ಕಾಣ ಕಾಣ ಕಾಣ ಕಾಣ ಕಾಣ ಉತ್ಪತ್ತಿ
ಎಲ್ಲಿಗೆ ಬಂತೊ ಲಿಂಗಯ್ಯಾ ?
ಇಲ್ಲಿಗೆ ಬಂತೊ ಸಂಗಯ್ಯಾ ॥

ಇಪ್ಪತ್ತನೆ ಶತಮಾನದ । ಬುದ್ಧಿ ಜೀವಿಗಳ ಹೊಸ ಶೋಧ
ಹತ್ತು ಇಪ್ಪತ್ತು ನೂರು ಸಾವಿರ ಯೋಜನೆಗಳ ಉತ್ಪತ್ತಿ
ಆದರೂ ಜನಗಳ ಹೊಟ್ಟೆಗಿಲ್ಲ ಊಟವು ಭರ್ತಿ
ಇದು ಬುದ್ಧಿ ಜೀವಿಗಳ ಸತ್ಯ ಸ್ಥಿತಿ
ಸುಧಾರಿಸಿದ ಜನಗಳ ಉತ್ಪತ್ತಿ ಎಲ್ಲಿಗೆ ಬಂತೋ ॥

ಂವ ಮಾಸ ಗರ್ಭಧಿಹೊತ್ತು । ಹೆತ್ತ ತಾಯಿ ನಿಜದೇವರು
ಂದು ನಂಬಿ ಕೈ ಮುಗಿಯುವ ಕಾಲ ಹಿಂದಾಯ್ತು
ಂವ ಮಾಸ ಗರ್ಭದಿ ಹೊತ್ತು । ಹೆತ್ತಿರುವದೇನು ಕಸರತ್ತು
ಂದು ಕೇಳುವ ಮಕ್ಕಳ ಸಂಖ್ಯೆ ಬಹಳಾಯ್ತು
ಮಾತೃ ದೇವೋಭವ । ಪಿತೃ ದೇವೋಭವ
ಎಂದು ಕೈ ಮುಗಿದು ನುತಿಸುವ ಸಂತತಿ ಎಲ್ಲೆತಿ ?
ವಿದ್ಯಾ ಕಲಿತು ಸುಧಾರಿಸಿದವರ ಹೊಸರೀತಿನೀತಿ
॥ಎಲ್ಲಿಗೆ ಬಂತೋ ॥

ಹಣೆ ತುಂಬ ಕುಂಕುಮ ಬೊಟ್ಟು । ತಲೆತುಂಬ ಶಿರಗಸ ಹೊದ್ದು
ಗಂಡನೆ ಗುರು ದೇವರು ಎಂದು । ಸಾಗಿಹ ಗರತಿಯರನು ಕಂಡು
ಹಲ್ಲು ಕಿರಿಯುತ । ಹಾಸ್ಯ ಮಾಡುತ
ತಿರಗುವ ಹೊಸಾ ಸ್ತ್ರೀಯರ ಗತ್ತು
ಅದು ಫ್ಯಾಶನ್ನಿನದೆ ಗಮ್ಮತ್ತು
ಲವ್ಹ ಲವ್ಹ ಲವ್ಹ ಲವ್ಹೆನ್ನುತ ಲವ್ಹ ಮಾಡಿ
ಡ್ರುನ್ ಡ್ರುನ್ ಡ್ರುನ್ ಮಾಡ್ರೆನ್ ಎನ್ನುತ ಮಜ ಮಾಡಿ
ಹಾಳಾಗುವರು ವಿದ್ಯೆಗಲಿತ ಕೆಲ ಸ್ತ್ರೀಯರು
ಭಾರತೀಯ ಸ್ತ್ರೀ ಸಂಸ್ಕೃತಿ ಮೂಲೆಗೊತ್ತುವರು
ಇದು ಕಲಿತ ಕೆಲವರ ಮೂಢ ಸ್ಥಿತಿ
ಸುಧಾರಣೆ ಕನಸಿನ ಉತ್ಪತ್ತಿ ಎಲ್ಲಿಗೆ ಬಂತೋ ॥

ಬ್ರಹ್ಮ ವಿಷ್ಣು ಮಹೇಶ್ವರರು । ನಮ್ಮನು ಕಾಯುವ ದೇವರು
ಎಂದು ನಂಬಿಕೈಮುಗಿದು ಸುಖ ಸಂತೋಷವ ಕಂಡರು ಹಿರಿಯರ
ಇಂದಿನವರ ರೀತಿಯೆ ಬೇರೆ । ದೇವರೆಂತು ನಮ್ಮನು ಕಾಯುವರು
ನಾವೆ ಅವರನ್ನು ಕಾಯುವೆವು ! ಎಂದು ಗುಡಿಯೊಳು ದೇವರನಿಟ್ಟು
ಬೀಗವ ಹಾಕಿ ದೇವರ ಬಂದಿಸಿರಿಸೀಗ ಕಾಯುವರು
ಅಂತೆ ವರಗಳ ನೀಡುವ ದೇವರು ಮೂಕರಂತೆ ಕಲ್ಲಾಗಿಹರು
ದೈವ ಭಕ್ತಿಗೆ ಮಾಡಿದರಿವರು ಕಂಟ್ರೋಲ್
ಜಪ ತಪ ಪೂಜಾ ವಿಧಾನಗಳಿಗೆ ಕಂಟ್ರೋಲ್
ಅದಕೆ ಪ್ರತಿಯಾಗಿ ದೇವರು ಮಾಡಿದನೆಲ್ಲದಕೂ ಕಂಟ್ರೋಲ್
ಇದುವೆ ಜ್ಞಾನವ ಗಳಿಸಿದ ವಿಜ್ಞಾನಕೆ ಬೆರೆತವರ ಸತ್ಯ ಸ್ಥಿತಿ
॥ ಎಲ್ಲಿಗೆ ಬಂತೋ

ರೇಣುಕಾದಿ ಪಂಚಾಚಾರ್ಯರಂಥ ಗುರುಗಳು ಎಲ್ಲಿ
ಅಲ್ಲಮ ಪ್ರಭು ಬಸವೇಶರಂಥ ಸ್ವಾಮಿ ಭಕ್ತರು ಎಲ್ಲಿ
ಹೇಮರಡ್ಡಿ ಮಲ್ಲಮ್ಮ ಅನಲಾಯಿಯಂಥ ಸತಿಯರು ಎಲ್ಲಿ
ಸತ್ಯವಾನ ಹರಿಶ್ಚಂದ್ರನಂಥ ಏಕಪತ್ನಿ ವ್ರತಸ್ಥರೆಲ್ಲಿ

ಗಾಂಧೀಜಿಯಂಥ ನಾಯಕರು ಶಾಸ್ತ್ರೀಜಿಯಂತ ಮಂತ್ರಿಗಳೆಲ್ಲಿ
ಅಂದಿನ ಗುರು ಹಿರಿ ಶೂರರ ಧೀರರ ರಾಷ್ಟ್ರವೀರ ಮಾನಾಯಕರ
ಧಾರ್ಮಿಕ ಬುದ್ಧಿಯು ನಿಜ ಸಂಪತ್ತಿನ ತಾಳಿಕೆ ಬಾಳಿಕೆ ಆಳಿಕೆಯೆಲ್ಲಿ
ಎಲ್ಲೈತಿ । ಹೈಬ್ರೀಡಾಗೈತಿ
ಸುಧಾರಿಸಿದ ತಳಿಯು ಉತ್ಪತ್ತಿ ಎಲ್ಲಿಗೆ ಬಂತೋ ॥

ಧರ್ಮ ಪೀಠದ ಶ್ರೀ ಗುರುದರ್ಶನ । ಶಾಸ್ತ್ರ ಶ್ರವಣದವರು ಕಡಿಮಾಯ್ತು
ಜೂಜಾಡುವದು ಹೆಚ್ಚಾಯ್ತು । ಇಸ್ಪೇಟಾಟವೆ ಮೆಚ್ಚಾಯ್ತು
ಸಿನಿಮಾಟಕೆ ಜನ ಹುಚ್ಚಾಯ್ತು । ನೈಟ ಕ್ಲಬ್‌ಗಳ ಹೌಸ ಫುಲ್‌ಆಯ್ತು
ದೊಡ್ಡಿಸ್ತನದ ಧೋತ್ರಾ ಉಡುವ । ಪೇಟಾ ರುಮಾಲ ಸುತ್ತಿ ಮೆರೆಯುವ
ಜನಗಳ ಸಖ್ಯೆ ಕಡಿಮಾಯ್ತು। ನ್ಯೂ ಸೋಸಿಯಲ್ ಮಾಡ್ರೀ ಟಾ ಟಾ
ಜೋರಾಯ್ತು
ಫುಲ್ ಪ್ಯಾಂಟ ಹಾಪ್ ಪ್ಯಾಂಟ ಫಿಟ್ ಪ್ಯಾಂಟ ಲೂಜ ಪ್ಯಾಂಟ ಬೆಲ್
ಬಾಟಂ-ಫ್ಯಾಶನ್ ರಂಗಾಯ್ತು
ಇದು ಮಾಡ್ರನ್ ಯುಗದ ಮೂಮೆಂಟು
ಇದು ಸೋಸಿಯಲ್ ಜನರ ಹೊಸ ನಂಟು ಎಲ್ಲಿಗೆ ಬಂತೋ ॥



## ಕುಮಾರ ಬಳ್ಳಿ

ರಾಗ:-ಪೀಲು ತಾಲ:- ದಾದರಾ

ಅಲ್ಲಿ ಇಲ್ಲಿ ಎಲ್ಲೆಲ್ಲಿ
ಗುರು ಕುಮಾರ ಬಳ್ಳಿ ॥

ವೀರಶೈವ ಧರ್ಮ ವೃಕ್ಷದಾಸರೆಯಲ್ಲಿ
ಹಬ್ಬ ಹಸುರಾಗಿದೆ ಇದು ಭೂಕಲ್ಪವಲ್ಲಿ
ಹರಸಾಕ್ಷಿಯು ಕುರುಹಾಗಿದೆ ಈ ಬಳ್ಳಿ
ಗುರುಸಾಕ್ಷಿಯು ಶವರಾಗಿದೆ ಈ ಬಳ್ಳಿ ॥

ಅನಾದಿ ನಿರಂಜನ ತತ್ವ ಘಟ್ಟಗೊಂಡು
ಜೋಯಿಸರ ಹರಳಹಳ್ಳಿಯಲ್ಲಿ ತಾ ಬಂದು
ನೀಲಾಂಬೆ ಬಸವಾರ್ಯರ ಉದರದಲ್ಲಿ
ಹರನ ಹಾಲ್ಗಾಳಾಗಿ ಹುಟ್ಟಿತಲ್ಲಿ
ಹಾಲು ತುಂಬಿದಾದೇಶದಿ ಹಾಲಯ್ಯನೆಂದ್ಹೆಸರಾಯ್ತು ॥

ಹಾನಗಲ್ಲ ಪೀಠವೇರಿ ಆಯ್ತು ಸಮಾಜದ ಕಾಳು
ಮಹಾ ಕೂಟದ ಮಡಿಲಿನಲ್ಲಿ ಬಂದು ನೆಲೆಸಿತು
ಶಿವಯೋಗದ ಯಜ್ಞವ ಆ ನೆಲದಿ ನಡೆಸಿತು
ಕಾಡು ಭೂಮಿಯದನು ಶಿವನ ಭೂಮಿಗೈಯಿತು
ಶಿವಯೋಗ ಮಂದಿರವೆಂದದನು ಮೆರೆಸಿತು ॥

ಸದಾಶಿವನಸಮಯವಾದೀ ತಾಣ ಪೂಜ್ಯವೆಂದಿತು.
ಇಲ್ಲಿ ನನ್ನೈಕ್ಯವೆನ್ನುವ ಸಂಕೇತದಿ ನೆಲೆಸಿತು
ನನ್ನಂತೆ ಹಲವು ಕಾಳು ಹುಟ್ಟಬೇಕಿಲ್ಲಿ
ಎನ್ನುವ ಸಂಕಲ್ಪದಿಂದ ನೆಟ್ಟಿತಲ್ಲಿ
ನೆಟ್ಟ ತಾನು ಪರಶಿವ ಸಸಿಯಾಗಿ ಬೆಳೆಯಿತಲ್ಲಿ
ಬೆಳೆದು ಭುವಿಯ ತುಂಬಿತು ಈ ಕಲ್ಪವಲ್ಲಿ
ಗುರುಕುಮಾರ ಬಳ್ಳಿ ॥

ಶಿವಧರ್ಮವೇ ಈ ಬಳ್ಳಿಯ ತಾಯಿಬೇರು
ಸರ್ವ ಧರ್ಮಗಳೆ ಇದರ ತಂತು ಬೇರು
ಸತ್ಯವೆ ಬೊಡ್ಡೆ । ನೀತಿಯೆ ದೋಟಿ
ಕಾಯಕಾದಿ ಶರಣ ಧರ್ಮ ತತ್ವಂಗಳು
ಗುರುಕುಮಾರ ಬಳ್ಳಿಯ ಪ್ರಮುಖಾಂಗ ಕುಡಿಗಳು
ಸಂಗೀತ ಸಾಹಿತ್ಯ ಲಲಿತಕಲೆಗಳು
ಈ ಬಳ್ಳಿಗೆ ಸಾವಿರಾರು ಶಾಖೋಪ ಶಾಖೆಗಳು

ಕಾಯಕ ಗುಣ ದುಂಬಿದ ಕಾಯಗಳೆ ಇದರ ಕಾಯಿಗಳು
ಹರ ಗುರು ಚರ ಮೂರ್ತಿ ಬಳಗಗಳೆ ಇದರ ಹಣ್ಣುಗಳು
ಈ ಬಳ್ಳಿಯ ಹಣ್ಣುಗಳು । ಹರಧರ್ಮದ ಕಣ್ಣುಗಳು ॥

ಶ್ರೀ ಕುಮಾರ ಸಮಯವೆ ಈ ಬಳ್ಳಿಯ ಸತ್ಪೀಠ
ಹುಬ್ಬಳ್ಳಿ ಜಗದ್ಗುರು ಮೂರುಸಾವಿರಮಠ
ಶ್ರೀ ಪೀಠದ ಗಂಗಾಧರ ರಾಜಯೋಗೀಂದ್ರ
ಈ ಬಳ್ಳಿಯ ಹೂವೊಂದು ಹರಡಿದೆ ಮಕರಂದ
ದೇಶ ವಿದೇಶದೆ ಮೆರೆಯುತ್ತಿದೆ ಹೂವದು ಹೆಸರಾಗಿ
ಗುರುಕುಮಾರ ಬಳ್ಳಿಯ ಹೃತ್ಸಂದೇಶದ ಕುಸುರಾಗಿ ॥

ಲಲಿತಕಲಾ ಪಟ್ಟದಲ್ಲಿ ಒಪ್ಪಿದಂಥ ಜೀವಿಗಳು
ಗುರುಕುಮಾರ ಬಳ್ಳಿಯ ಜೀವಂತ ಕುಡಿಗಳು
ಹರಗುರು ಚರ ಪಟ್ಟದಲ್ಲಿ ಮೆರೆಯುವ ಗುರುಸ್ವಾಮಿಗಳು
ಗುರುಕುಮಾರ ಬಳ್ಳಿಯ ಮಿಡಿವಂತ ಮಿಡಿಗಳು
ನಾಡತುಂಬಿಕೊಂಡಿವೆ । ದೇಶ ತುಂಬಿಕೊಂಡಿವೆ
ದೇಶ ದೇಶಗಳ ತುಂಬಿ ವಿಶ್ವವನ್ನೇ ವ್ಯಾಪಿಸಿವೆ
ಗುರುಕುಮಾರ ಬಳ್ಳಿಯ ನಿಜ ವಿರಾಡ್ರೂಪ ತೋರಿಸಿವೆ
ವಿಶ್ವ ವಿಶ್ವಾಸ ತುಂಬಿ ವಿಸ್ತರಿಸಿದ ಈ ಬಳ್ಳಿ
ವಿಶ್ವೇಶ ರೂವಳ್ಳಿ ಭೂ ಕಲ್ಪವಲ್ಲಿ ಗುರುಕುಮಾರ ಬಳ್ಳಿ ॥ ○

## ಹಾರ್ನಳ್ಳಿ ಸ್ವಾಮಿಗೆ ಶರಣಾಗು

ರಾಗ:- ತಿಲಕಾಮೋದ ತಾಲಃ ದಾದರಾ

ಶರಣೆಂದು । ಶರಣು ಶರಣೆಂದು
ಹಾರ್ನಳ್ಳಿ ಸ್ವಾಮಿಗೆ ಶಿರಬಾಗು ॥

ಶರಣರ ನುಡಿಯಂತೆ ನುಡಿದವಗೆ
ಶರಣರ ನಡೆಯಂತೆ ನಡೆದವಗೆ

ಹಾರ್ನಳ್ಳಿ ಕೋಡಿಮಠಕೆ ಗುರುವಾಗಿ ಮೆರೆದವಗೆ
ಕರ್ತೃ ಶ್ರೀನೀಲಮಜ್ಜಯ್ಯನ ಗುಡಿಮಂದಿರಕೆ ॥

ಬಸವನ ಭಕ್ತಿ । ನೀಲಲೋಚನ ಶಕ್ತಿ ಒಕ್ಕೂಟದೋಂಕಾರ ಮೂರ್ತಿ
ಲಿಂಗ ಕಳೆಯಿ ಇಳೆಗಿಳಿದ ನೀಲಮಜ್ಜಯ್ಯ ಚರಕೀರ್ತಿ
ಶಿವಲಿಂಗ ನಾಮದ ಹಾರ್ನಳ್ಳಿ ಗುರುಮೂರ್ತಿಸ್ವಾಮಿಗೆ ನೀ ಬಾಗು ॥

ಸ್ಮರಿಸಿದವರ ಹತ್ತಿರವೆ ಇರತಾನ ಸ್ವಾಮಿ । ಶಿವಲಿಂಗ ।
ಕರೆದಾಗ ಓ ಎಂದು ಮಾತಾಡ್ತಾನ ಸ್ವಾಮಿ । ಶಿವಲಿಂಗ ।
ಹೊತ್ತಗೆಯ ರೂಪದಿಂದ ನಮ್ಮ ನುಡಿ ಕೇಳ್ತಾನ ।ಸ್ವಾಮಿ
ಗದ್ದಿಗೆಯ ರಂದ್ರದಿಂದ ನಮ್ಮ ನೋಡ್ತಾನ । ಶಿವಲಿಂಗ
ರೋಗ ಕಳೀತಾನ । ಹರಕೆ ಕೊಡತಾನ । ಸ್ವಾಮಿ
ಜಾಗ್ರುತ ಶಿವಶಕ್ತಿ ಶಿವಲಿಂಗಸ್ವಾಮಿ ಗದ್ದಿಗೆಗೆ ॥

ಶಿವಯೋಗದ ಮಹಾಸಾಗರ । ಆ ಶಿವಯೋಗಮಂದಿರ
ಆ ಶಿವಸಾಗರದಲ್ಲಿ ಅರಳಿದ ಅರವಿಂದ । ಚರಾರವಿಂದ
ಅದರ ತುಂಬ ತುಂಬಿದೆ ಶಿವಧರ್ಮ ಸೌಗಂಧ । ಚರತತ್ವಗಂಧ
ಆ ಗಂಧ ಹೊತ್ತು ತಂದ ಶಿವಲಿಂಗನ ಕಂದ । ಶಿವಮಂದಿರದಿಂದ
ಹಾರ್ನಳ್ಳಿ ವಿರತ ಪೀಠವಾರೋಹಿಸಿ ನಿಂದ । ಗುರುವಾಗಿ ಮೆರೆದ
ಶ್ರೀನಿರಂಜನ ಪ್ರಣವಸ್ವರೂಪಿ ನೀಲಲೋಚನ ಸ್ವಾಮಿಗೆ ನೀ ಬಾಗು ॥



## ಕನ್ನಡ ನಾಡಿನ ಭಾಗ್ಯ

ರಾಗ:=ಭೀಮಪ್ಲಾಸ

ತಾಲ:-ಖವಾಲಿ

ಕನ್ನಡ ನಾಡಿನ ಭಾಗ್ಯ । ಕನ್ನಡಿಗರ ಸೌಭಾಗ್ಯ
ಅವತಾರ ಗೊಂಡ ಕುಮಾರ । ಸುಕುಮಾರ ॥

ಬಸವ ಭಕ್ತಿಯ ಸಾರ । ಅಲ್ಲಮ ಶಕ್ತಿಸಾಕಾರ
ಹಾನಗಲ್ಲಧೀಶ ಕುಮಾರ । ಸುಕುಮಾರ
ಶಿವಯೋಗ ಮಂದಿರ ಕುಮಾರ । ಸುಕುಮಾರ ॥

ಶಿವನ ಧರ್ಮದ ಶುಭದಾನ
ಶರಣ ಧರ್ಮದ ಸಙ್ಕೀರ್ತನ
ತಾನಾದ ಶ್ರೀಜೀವನ । ಕುಮಾರನ ಗುಣಮನ ।
ಶಿವಮನ । ನಿಜ ಚೇತನ ॥
ಮಠದಿಂದ ಘಟ ಬೆಳಗಬಾರದು
ಘಟದಿಂದ ಮಠ ಬೆಳಗಬೇಕೆಂದು
ಶಿವ ತತ್ವ ತುಂಬಿದ ಘಟ ವಟು ಸಿದ್ಧಿಗೆ
ಶಿವಯೋಗ ಮಂದಿರ ಸ್ಥಾಪಿಸಿದ
ಹರಧರ್ಮದ ಚಿರ । ಕೀರ್ತಿ ಮೆರೆದ ॥
ವೀರಶೈವದ ಮಹಾ ಸಭೆಯು
ಆದರ ಜನಕ ಕುಮಾರ ಚಿರಾಯು
ಮಠ ಮಂದಿರಗಳ ಪ್ರಭೆಯು
ಅದು ಕುಮಾರಸ್ವಾಮಿಯ ಕೃಪೆಯು
ಹರನವತಾರ । ಗುರುಕುಮಾರ ॥



## ಶನಿದೇವ ನಮೊ

ರಾಗ:- ಪೀಲು | ತಾಲಃ- ಖವಾಲಿ

ದೇವ ನಮೊ । ಶನಿ ದೇವ ನಮೋ
ದೇವ ದೇವ ಶನಿದೇವ ನಮೋ ॥

ಕಷ್ಟವ ಕಳೆಯುವ ಶನಿದೇವ ।ಇಷ್ಟವ ನೀಡುವ ಶನಿದೇವ
ದುಷ್ಟರ ನಾಶಕ ಶನಿದೇವ । ಶಿಷ್ಟರ ಪೋಷಕ ಶನಿದೇವ ॥
ಹರನೊಲಿಸಿದ ಹರಪ್ರಿಯದೇವ । ಹರಿಗಾತ್ಮೀಯ ಶ್ರೀಸುರದೇವ
ಸುರ ನರ ಪೂಜಿತ ಮಹಾದೇವ। ಸರ್ವರು ಬಾಗುವ ಶನಿದೇವ ॥
ಕಾಡಿಸಿ ವಿಕ್ರಮಗೊಲಿದ ಸುದೇವ । ಬೇಡಿಸಿ ನಳನನು ಪೊರೆದ ಶ್ರೀದೇವ
ನೋಡಿ ಹರಿಶ್ಚಂದ್ರನ ಪರಿಕಿಸಿದವ । ನಾಡಿನಲ್ಲಿ ಮೆರೆಸಿದ ಮಹನೀಯ

ಸೊಕ್ಕಿನವರ ಮಣ್ಮುಕ್ಕಿಸಿ ಬಿಡುವ | ನಕ್ಕು ನಿಂದಿಪರ ಜಂಭವ ಕ
ಭಕ್ತಿಯಿಂ ಭಜಿಸುವವರಿಗೆ ಒಲಿವ | ಮುಕ್ಕಣ್ಣನ ಗುಣ ಪ್ರತಿ ದೇ
ಸೂರ್ಜನ ತನುಜ ಶನಿದೇವ | ಯಮುನ ಆಗ್ರಜ ಗುಣರಾಜ
ಗ್ರುಹದಲಿ ತೇಜ ಮಹಾತೇಜ | ಗ್ರುಹರಾಜನೆ ಶ್ರೀ ಶನಿರಾಜ ||



## ಗೌರಾಂಬಾ

ರಾಗ:=ಕಾಪಿ

ತಾಲ:=ಖಪ

ಬಗಳಾಂಬಾ ಶ್ರೀಯಂಬಾ ಮಮಾಂಬಾ
ಜಗದಂಬಾ ಶಿವೆಸಾಂಬಾ ಗೌರಾಂಬಾ ||

ವೀಣಾಪಾಣಿ ಶ್ರೀಬಗಳಾಂಬಾ | ಗೀತಾಂಬಾ ಗಾನಾಂಬಾ ಗೌರಾಂಬಾ
ವಾಣಿ ಪಾನಿ ಶ್ರೀ ಬಗಳಾಂಬಾ | ವಿದ್ಯಾಂಬಾ ಜ್ಞಾನಾಂಬಾ ಜಗದಂ
ಗಾನ ನೃತ್ಯ ಶ್ರೀಲೋಲಾಂಬಾ | ನಾದಾಂಬಾ ನೃತ್ಯಾಂಬಾ ಬಗಳಾಂಬಾ
ಅಜ್ಞಾನ ಸುಜ್ಞಾನ ಮಾಲೀಲಾಂಬಾ | ವೇದಾಂಬಾ ಮೋದಾಂಬಾ
ಗೌರಾಂಬಾ ||

ಕೈಲಾಸವಾಸಿ ಶಿವ ವಾಮಾಂಗಿ | ಅರ್ಧಾಂಗಿ ನೀನಂಬಾ ಗೌರಾಂ
ಭೂಲೋಕವಾಸಿಗಳಿಗೆ ಶುಭಾಂಗಿ | ಪೂರ್ಣಾಂಗಿ ನೀನಂಬಾ ಗಂಗಾಂ
ಜಂಗಮ ಲಿಂಗ ಗುರು ಶಿವಲಿಂಗ | ವರದಾಂಗಿ ನೀನಂಬಾ ಗೌರಾಂಬಾ
ಭಕ್ತಿಯ ಮಾಡ್ವ ಆಳು ಮಾಡಾಳು | ಎಂದೆ ಕೃಪಾಂಗಿ ನೀ ಜಗದಂ

ಮಡಿ ಉಡಿಗಿಂದಲಿ ಬಾಗಿದವರ | ಎತ್ತಿಕೊಂಬ ನೀನಂಬಾ ದಯಾಂ
ಆರತಿ ಗುಗ್ಗುಳ ಬೆಳಗುವವರ | ರಕ್ಷಿಪ ಕರುಣಾಂಬಾ ಗಿರಿಜಾಂಬಾ
ಗಂಧ ಚಂದನಕುಂಕುಮವಿತ್ತವರ | ಹರಸುವ ಅಭಯಾಂಬಾ ಭಕ್ತಾಂ
ಹಣ್ಣು ಕಾಯಿ ಎಡೆ ಇತ್ತು ನೆನೆವರ | ಮೆರೆಸುವೆ ನೀನಂಬಾ ಗೌರಾಂ



## ಶರಣನ ಭಜಿಸಲೆ

ರಾಗ:–ಕಾಫಿ ತಾಲ:–ಖವಾಲಿ

ಶರಣು ಬಸವ । ಬಸವ ಶರಣು ।
ಶರಣು ಶರಣು ಬಸವ ಶರಣೆಂದು
ಶರಣನ ಬಜಿಸಲೆ ಅನವರತ
ಶರಣ ಬಸವನ ಧ್ಯಾನಿಸೋ ನೀ ಸತತ ॥

ತಾಯ್ತಂದೆ ಶಿವನಂದಿ ನೀನೆಂದು । ಮರುಳಸಿದ್ಧೇಶ್ವರನ ಕಿರಣೆಂದು
ನಂಬಿ ನುತಿಪರ ಬಳಿಗೆ ತಾ ಬಂದು । ಚಂದದಿ ಪೊರೆವ ಕಾರುಣ್ಯಸಿಂಧು॥

ಸಂಬಿಕರೆದೊಡೆ ಓ ಎಂದು ಬರುವ । ಹಂಬಲಿಸಿದವರ ಹಂತ್ಯಾಕ ಇರುವ
ಶಿವ ಶಿವ ಎಂದು ಧರ್ಮದಿ ನಡೆವ । ಭಕ್ತರನರಸಿ ತಾ ಬಂದು ಕಾಯುವ ॥

ನೆನೆಸಿದರೆ ಸಾಕು ಆನಂದಗೊಳುವ ।ತನುಮನಧನಸೇವೆ ಕೊಳ್ಳುತ್ತಲಿರುವ
ದಿನ ದಿನ ಚಣ ಚಣ ಭಕ್ತರ ಮನವ।ಪರಿಕಿಸಿ ಪೊರೆಯುತ ಇಷ್ಟಾರ್ಥಕೊಡುವ

ಶರಣ ಬಸವ ಬಸವ ಶರಣು । ಶರಣೆಂದವರ ನಿರುತದಿ ನೋಡುವ
ತೊರೆಯಿಂ ಬರುವ ಶಿರವಿಡಿದೆತ್ತುವ! ಶರಣ ಬಸವ ಪ್ರತ್ಯಕ್ಷ ಭೂ ಶಿವ ॥

ಕಲಿಪುರದಧಿದೈವ ಗುರುವೀರಘಂಟೇಶ । ಮಡಿವಾಳೀಶ ಗುರುಶಿಷ್ಯರ ಜೋಡಿ
ಬೆಳಗಿನಕುರುಹಾಗಿ ಜೋಡಿ ಮುಖದಲಿ । ಕಲಿಪುರ ಮಠದ ಕೀರ್ತಿಯು ಜ್ಯೋತಿ



## ಬಾವ್ರೊಮ್ಮ ಹಾಣ್ಣಳ್ಳಿಗೆ

ರಾಗ:–ಭೈರವಿ ತಾಲ:–ದಾದರಾ

ಬಾವೊಮ್ಮ ಹಾರ್ನಳ್ಳಿಗೆ । ಬಾಗೊಮ್ಮ ಕೋಡಿಮಠದೀಶಗೆ
ಬಾವೊಮ್ಮ ಬಾಗೊಮ್ಮ ಕೋಡಿಮಠದ ಸ್ವಾಮಿಗೆ ಬಾಗೊಮ್ಮ ॥

ಮೂಲಗುಂದದಲ್ಲಿ ಜನಿಸಿ ಬಂದಾನ । ನೀಲಲೋಚನರ ಸೇವೆ ಗೈದಾನ

ಮಲೆನಾಡಕೋಡಿಮಠದಧಿಕಾರಿಯಾಗ್ಯಾನ! ಶಿವಲಿಂಗನಾಮದಿಂದ ಮೆರೆಪ
ಭಕ್ತೀಲಿ ಬಾಗಿದವರ ಎತ್ತಿಕೊಂಡಾನ ! ಬೇಡಿದಿಷ್ಟಗಳ ಹರಕೆ ಕೊಟ್ಟಾನ
ನೀಲಮ್ಮಜ್ಜಯ್ಯರ ಸನ್ನಿಧಿಯಲ್ಲಿ । ಲಿಂಗವಾದ ಶಿವಲಿಂಗನ ಸಮಾಧಿಗೆ ॥

ನೀಲಮಜ್ಜಯ್ಯ ಶಿವಲಿಂಗೇಶ್ವರ । ಉಭಯ ಗುರುಮೂರ್ತಿಗಳ ಶುಭಸ
ಸುಕುಮಾರನಾಸಿಸದ ಚರ ಕುವರ । ಈಗ ಕೋಡಿಮಠಾಧೀಶ್ವರ
ಲಿಂಗಾನುಷ್ಠಾನ ಧುರಂಧರ । ಜಗವು ಸಲ್ಲೀಲಾವತಾರ
ಶ್ರೀ ನೀಲಲೋಚನಸ್ವಾಮಿ । ಸನ್ನಿಧಿಗೆ ಭಕ್ತಿಯಲಿ ಬಾಗೊಮ್ಮ ॥

ಶಿವಯೋಗಮಂದಿರದ ಕಿರಣ । ನೀಲಲೋಚನ ಸ್ವಾಮಿ ತಾನ
ಹಾನ್ಗಲ್ಲೀಶನ ಕಾರುಣ್ಯದ ಕೋಡಿ । ಹರಿಸುತಿದೆ ಕೋಡಿಮಠ ನೂರಡಿ
ಮಲೆನಾಡ ಶಿವಯೋಗಮಂದಿರವಿದು ಎಂದು ಹಾನ್ಗಲ್ಲಸ್ವಾಮಿ ಬರತಾನ
ಮಂದಿರವದು ಈ ಮಠವಿದು ಬೇರಲ್ಲ! ಎಂದು ನೀಲಲೋಚನರೊಡನೆ ಮೆರೆತ

○

## ಗೌರಮ್ಮ ಕಾಯಮ್ಮ

ರಾಗ:-ಗೌರಿ                ತಾಳ:-ಖಸ

ಗೌರಮ್ಮ ಕೃಪೆದೋರಿ ಕಾಯಮ್ಮ
ಅಮ್ಮಾ ಎಂದವರ ನೀನೆತ್ತಿ ಕೊಳ್ಳಮ್ಮ ॥

ಹರನಳ್ಳಿ ಕೈಲಾಸವಾಸಿ ನೀನಮ್ಮ
ನರರಿಗೊಲಿವುತೆ ಧರೆ ತುಂಬಿದೆಯಮ್ಮ
ಕೋಡಿಮಠದ ಗುರು ಮಗಳಾದೆಯಮ್ಮ
ಸೇವೆ ಮಾಡ್ಸ ಮಾಡಾಳದೆ ನಿಂತೆಮ್ಮ ॥

ಹಾರ್ನಳ್ಳಿ ಕೋಡಿ ಮಠದ ಸ್ವಾಮಿ ಸನ್ನಿಧಿಯೊಳು
ಗೌರಿ ಜಾತ್ರೆಯ ಮಾಡು ಸುಖದಿ ಆಳೆನುತಿದೆ ಮಾಡಾಳು
ಗೌರಮ್ಮನ ಸೇವೆ ಮಾಡು ಆರಸಾಗಿ ಆಳುನೀಮಾಡಾಳು
ಎಂದ ಶ್ರೀ ಶಿವಲಿಂಗ ಗುರು ವರದ ಪುರವೆ ಮಾಡಾಳು ॥

ಗೌರಿಗೆ ಹೂ ಮಾಲೆ ಧರಿಸಿದರೆ ಭವಮಾಲೆ ನಿನಗಿಲ್ಲ
ತಾಯಿಗೆ ಗುಗ್ಗುಳ ಹೊತ್ತರೆ ನಿಮಗೆ ದುಃಖಗಳೆ ಇಲ್ಲ
ಅಜ್ಜಿಗೆ ಕರ್ಪೂರ ಬೆಳಗಿದರೆ ನಮಗೆ ಕಷ್ಟಗಳೆ ಇಲ್ಲ
ಗೌರಿ ಜಾತ್ರೆಯ ಮಾಡು ಆ ತಾಯಿ ನಿನ್ನ ಕಾಯ್ವಳು ಹಗಲೆಲ್ಲ

## ಬಸವನ ಹಾಡು

ರಾಗಃ-ಭೀಮಪ್ಲಾಸ ತಾಲ:- ಖವಾಲಿ

ಬಸವನ ಹಾಡು । ಶರಣ ಬಸವನ ಹಾಡು
ಬೆಳಕಿನ ಹಾಡು । ಬಾಳು ಬೆಳಕಾಗುವ ಹಾಡು
ವಸುಧೆಗೆ ಹಿತವ । ಎಸಗಿದ ದೇವ
ಬಸವನ ಹಾಡು । ಮನ ಹಸನಾಗುವಹಾಡು ॥

ರೊಕ್ಕ ಕೊಡತಾರಂದು । ಜನ । ನಕ್ಕು ಕುಣೀತಾರೆಂದು
ತತ್ವವಿಲ್ಲದ ಬರಿ ಹಾಡ । ಕಟ್ಟಿ ನೀ ಹಾಡಬೇಡ
ಬಸವಳಿಯುವ ಮನ । ಹಸಗೆಡಿಸುವ ಪದ
ಹಾಡಿ ಹಾಳಾಗಬೇಡ । ಹಣಕೆ । ಕಂಠ ಮಾರಿಕೊಳಬೇಡ
ಹಾಡು ಬಸವನ ಹಾಡು ॥

ನಯವೆ ನೀತಿ ದಯವೆ ಧರ್ಮ । ಎಂದು ಸಾರಿದ ಬಸವ ಮಹಿಮ
ಇವನಾರವ ಇವನಾರವ ಎನ್ನದೆ । ಇವ ನಮ್ಮವ ಇವ ನಮ್ಮವನೆಂಬ
ವಿಶ್ವಕೌಟುಂಬಿ । ನಿಜ । ಮಾನವತಾವಾದಿ
ದೇವ ಮಾನವ ಬಸವ । ಅವನ ಕೊಂಡಾಡಲೆ ಜೀವ
ಜೀವನುದ್ಧರಿಸುವ ಬಸವ ॥

ಜಂಗಮ ಸೇವೆಗೆ ಮುಡುಪಾದ । ಲಿಂಗ ಧರ್ಮದ ಬೆಳಕಾದ
ಮುಗಿದ ಕೈಯ ಬಸವ । ಬಾಗಿದ ಮೈಯ ಬಸವ
ಬೃತ್ಯಾಚಾರಿ ಶಿವ । ಭಕ್ತಿ ಭಂಡಾರಿ । ಬಸವ ಬಸವ ಬಸವ ಎಂದು
ಬಸವ ಭಕ್ತಿಯ ಗೀತೆಯ ಹಾಡು। ಬಸವಾನಂದದಿ ನೀ ಕೂಡು ॥ ೦

# ಅಂಬಾ ಭವಾನಿ

**ರಾಗಃ-ಅಹೇರ ಭೈರವ** **ತಾಲಃ-ಖವಾಲಿ**

ಅಂಬಾ ಽ ಽ ಽ ಽ ಽ ಭವಾನಿ ಽ ಽ ಽ
ಅಂಬಾ ಭವಾನಿ ಜಗದಂಬಾ ಭವಾನಿ
ತುಳಜಾಂಬಾ ಭವಾನಿ । ರುದ್ರಾಂಬಾ ಭವಾನಿ
ಭವಾನಿ ಽ ಽ ಽ ಽ ಽ ಽ ಅಂಬಾ ಭವಾನಿ ಭವಾನಿ ಭವಾನಿ ॥

ದುಷ್ಟ ಶಿಕ್ಷಕಿ ಶಿಷ್ಟ ರಕ್ಷಕಿ ಅಂಬಾ ಭವಾನಿ
ಸೃಷ್ಟಿ ಜಾನಕಿ ಜೀವ ಪಾಲಕಿ । ಕಷ್ಟ ನಾಶಕಿ ಶ್ರೇಷ್ಟ ನಾಯಕಿ ॥
ರುದ್ರ ರುದ್ರಾಣಿ ಅಂಬಾ ಭವಾನಿ । ವಿಷ್ಣು ಸ್ವರೂಪಿಣಿ ಅಂಬಾಭವಾನಿ
ಬ್ರಹ್ಮ ಸಾಕ್ಷರಿ ಅಂಬಾಭವಾನಿ । ಸಕಲ ಸುರೇಶ್ವರಿ ಅಂಬಾಭವಾನಿ ॥
ಮಧು ಮಹಿವಂತಿ ಅಂಬಾಭವಾನಿ । ಭೂ ಭಾಗ್ಯವಂತಿ ಅಂಬಾಭವಾನಿ
ಜಯ ಜೈವಂತಿ ಅಂಬಾಭವಾನಿ । ಶುಭ ಗುಣವಂತಿ ಅಂಬಾಭವಾನಿ ॥

ದಾನಾಂಬಾ ಎಂದು ಹೆಸರಾದೆ ಗುಡ್ಡಾಪುರದೆ ಜಗದಂಬೆ
ಕೊಲ್ಲಾಪುರದೆ ಮಹಲಕ್ಷ್ಮಿ ನೀ ಎಲ್ಲಾ ದೇವರ ಸಿರಿಯಂಬೆ
ಬನದ ಶಂಕರಿ ನಾಮದಿಂದೆ ಬದಾಮಿಯೊಳು ನಿಂದೆ ಜಗದಂಬೆ
ಕೊಲ್ಲೂರೊಳು ಮೂಕಾಂಬೆ ನೀ ತುಳಜಾಪುರದಲ್ಲಿ ತುಳುಜಾಂಬೆ
ಗದಗ ಬೆಟಗೇರಿ ಕರಿಯಮ್ಮ ಶಿರ್ಶಿಪುರದೆ ನೀ ಮಾರೆಮ್ಮ
ಸವದತ್ತಿ ಗುಡ್ಡದೆಲ್ಲಮ್ಮ ಮುನಿರಾಬಾದದೆ ಹುಲಿಗೆಮ್ಮ
ಕಂಚಿ ಕಾಮಾಕ್ಷಿ ಮದುರೆ ಮೀನಾಕ್ಷಿ ಗತ್ತರಗಿ ಪುರದೆ ಭಾಗಮ್ಮ
ಗ್ರಾಮ ದೇವತ ದುರ್ಗಾದೇವತ ನಾಡ ದೇವತ ಜಗದಂಬಾ
ಲಕ್ಷ್ಮೀ ಸರಸ್ವತಿ ಕಾಲ ಭೈರವಿ ಸಂತೋಷ ಮಾತಾ ಜಗದಾಂಬಾ
ಅಂಬಾ ಜಗದಂಬಾ ಉಡಚಾಂಬಾ ಚೌಡಾಂಬಾ ಬಗಳಾಂಬಾ
ಶ್ರೀ ಗೌರಾಂಬಾ ॥

ರುದ್ರ ರುದ್ರೇಶ್ವರಿ ಭದ್ರ ಭದ್ರೇಶ್ವರಿ ಶಂಕರಿ ಅನ್ನ ಪೂರ್ಣೇಶ್ವರಿ
ಮ್ಹಾಹೇಶ್ವರಿ ಮಹಾಮಾಯೆ ಮಾತಂಗಿ ಶಾಕಂಬರಿ ಭುವನೇಶ್ವರಿ ...

ಚಂಡಿ ಚಾಮುಂಡಿ ದುರ್ಗಿ ಮಹಾಕಾಳಿ ಕಪಾಲಿ ತ್ರಿಶೂಲಿ ಶ್ರೀಗೌರಿ
ಹರ ಹರ ಹರ ಹರ ಹರ ಭಾಗೇಶ್ವರಿ । ಹರಿ ಹರಿ ಹರಿ ಹರಿ ಹರಿ ಸರ್ವೇಶ್ವರಿ
ರಾಮ ರಾಮ ರಾಮ ರಾಮ ಅಂಬಾಭವಾನಿ । ಕೃಷ್ಣ ಕೃಷ್ಣ ಕೃಷ್ಣ ಕೃಷ್ಣ
ಅಂಬಾಭವಾನಿ
ಜೈ ಶಿವೆ ಜೈ ಶಿವೆ ಅಂಬಾಭವಾನಿ। ಜೈ ಲಕ್ಷ್ಮಿ ಜೈ ಲಕ್ಷ್ಮಿ ಅಂಬಾಭವಾನಿ ೦

## ಹಾರ್ನಳ್ಳಿ ಪುರವಾಸ

ರಾಗ:–ಶುದ್ಧ ಕಲ್ಯಾಣಿ ತಾಲ:- ದೀಪಚಂದಿ

ಹಾರ್ನಳ್ಳಿ ಪುರವಾಸ । ಕೋಡಿ ಮಠದೀಶ
ಶ್ರೀನೀಲಲೋಚನ ಶಿವಲಿಂಗೇಶ । ಶಿವಲಿಂಗೇಶ ॥

ಹರ ನಿರಂಜನಶಕ್ತಿ ಧರೆಗಿಳಿದ ಮೂರ್ತಿ
ಹರನ ಹಳ್ಳಿಯಲಿ ನೆಲೆದು ಬೆಳಗುವ ಜ್ಯೋತಿ
ಪರಮ ಶ್ರೀ ನೀಲಲೋಚನ ಸ್ವಾಮಿ ಕೀರ್ತಿ
ಮೆರೆದ ಶಿವಲಿಂಗ ಗುರುಮೂರ್ತಿ ಶಿವಮೂರ್ತಿ
ಚರಪೀಠ ಕೋಡಿಮಠದ ಕರ್ತೃ ಶ್ರೀ ಮೂರ್ತಿಸತ್ಯಗಣಮೂರ್ತಿ ॥

ಅರಸ ಹೊಯ್ಸಳ ಹೈದರಾಲಿಗಳ ಪೊರೆದವರು
ವರಗೌರಿ ಮಾಡಾಳಮ್ಮಗೆ ಮೂಗುತಿ ಇತ್ತವರು
ಹಿರಿ ತೊನ್ನ ರೋಗಿಗೆ ಉಗುಳಿಸಿ ರೋಗ ಕಳೆದವರು
ಮೊರೆ ಕೇಳಿ ಭಕ್ತಗೆ ನದಿಯಲ್ಲಿ ಬೆಂಕಿಯ ಕೊಟ್ಟವರು
ಅರಸಿಕೆರೆ ಪ್ರಾಂತದ ಶ್ರೀಕೋಡಿಮಠದಾರ್ಯರು
ಮಲೆನಾಡ ಚರರು ॥

ಭರದಿ ಕಚ್ಚುವ ಹಾವನ್ನು ಹಿಡಿದಾಗಿ ಒಯ್ದವರು
ವರಜ್ಯೋತಿಷ್ಯದ ಹೊತ್ತಿಗೆಯಿಂದ ಮಾತಾಡುವರು
ಸುರರಿಂದ ಮಂಗಳಾರತಿ ಪೂಜೆಕೊಳ್ಳುತ್ತಲಿಹರು
ಹರನಳ್ಳಿ ಕೋಡಿಮಠ ಭೂಕೈಲಾಸ ಗೈದವರು
ಸ್ಮರಿಸಿದಾ ಜನರ ಉದ್ಧರಿಪ ಜಾಗ್ರತರು ಪರಮ ಪಾವನರು॥ ೦

# ಶಿವಾಚಾರ್ಯರಿಗೆ ವಂದನೆ

ರಾಗ :- ಜೈಜೈವಂ                                   ತಾಲ: - ದಾದರಾ

ಶ್ರೀ ಶಿವಾಚಾರ್ಯರಿಗೆ ವಂದನೆ
ಜಗದಾಚಾರ್ಯರಿಗಭಿನಂದನೆ
ಪಂಚ ಪೀಠಾಧೀಶ ಜಗದ್ಗುರುಗಳೈವರಿಗೆ
ಶಿರಸಾಷ್ಟಾಂಗ ಪ್ರಣಾಮದರ್ಪಣೆ ||

ಕಿರಿದರಲ್ಲಿ ಹಿರಿತನವ ಕಾಣುವ
ಅರಿಯದ್ದನ್ನು ಅರಿವಾಗಿಸಿ ತೋರುವ
ತೋರಿದ್ದನ್ನು ಕುರುಹಾಗಿಸಿ ಕರಸ್ಥಲಕೆ ನೀಡುವ
ಕಸದಲ್ಲಿ ರಸವನ್ನು ಅರಸುವ ಹಿರಿಭಾವ
ಆ ರಸದಲ್ಲಿ ಸಮರಸವ ಬೆರೆಸುವ ಸಮಭಾವ
ಸಮರಸದಲಿ ಶಿವಸಮತೆ ಕಾಣ್ವ ವೀರಶೈವದ ||

ಜೀವಾತ್ಮ ಪರಮಾತ್ಮನ ಕಿರಣ
ಎಂಬ ಸಾಕ್ಷಿ ಇಷ್ಟಲಿಂಗ ಧಾರಣ
ಅಂಥ ಶ್ರೀಲಿಂಗಿಗೆ ಜನನ ಮರಣವಿಲ್ಲೆನುವ
ಜನನಕ್ಕೆ ಲಿಂಗೋದ್ಭವವೆನ್ನುವ
ಮರಣಕ್ಕೆ ಲಿಂಗೈಕ್ಯವೆಂದೆನ್ನುವ
ಸೃಷ್ಟಿ ಸ್ಥಿತಿ ಲಯ ಲಿಂಗಲೀಲೆ ಎನುವ ಶಿವಮತದ ||

ಉಣ್ಣುವನ್ನ ಶಿವಪ್ರಸಾದವೆನ್ನುವ
ಕುಡಿಯುವ ಜಲ ಪಾದೋದಕವೆನ್ನುವ
ಶಿಲೆಯಲ್ಲಿ ಶಿವರೂಪವನ್ನು ಕಂಡು ಬಾಗುವ
ಹೆಣ್ಣಿನಲ್ಲಿ ತಾಯಿಶಕ್ತಿಯನ್ನು ಕಾಣುವ
ಆ ಶಕ್ತಿ ಶಿವನಲ್ಲೊಂದಿರಿಸಿ ನೆನೆಯುವ
ನೆನೆದಂತೆ ಮನನ ಮಾಡಿಕೊಳುವ ವೀರಶೈವದ ||

ಜೀವಿಗೆ ಆ ದೇವ ಪಟ್ಟ ಕಟ್ಟುವ
ಆ ದೇವಗೆ ಜೀವತ್ವ ಪ್ರತಿಷ್ಠಾಪಿಸುವ
ಜೀವ ದೇವರಲ್ಲಿ ನಿಜದ ಅಭಿನ್ನತೆಯ ಸ್ಥಾಪಿಸುವ
ಮರ್ತ್ಯ ಲೋಕವನ್ನು ಸತ್ಯ ಲೋಕ ಗೈಯುವ
ಕರ್ಮಕ್ಕೆ ಧರ್ಮ ಸಂಸ್ಕಾರವೀವ
ಭವಕೆಲ್ಲಕೆ ಶಿವದೀಕ್ಷೆಯ ಕೊಡುವ ವೀರಶೈವದ ॥ ೦

## ಅಕ್ಕಲಕೋಟೆಯ ಸಮರ್ಥ

ರಾಗ:-ನಟ್‌ನಾರಾಯಣಿ

ತಾಲ:-ಕೆಹರವಾ

ಅಕ್ಕಲಕೋಟೆಯ ಸಮರ್ಥ ಸ್ವಾಮಿ ಮಹಾರಾಜ
ದತ್ತನ ಅವತಾರಿ ಮರ್ತ್ಯವ ಬೆಳಗಿದ ಮಹಾತೇಜ ॥

ಎಲ್ಲಿ ಹುಟ್ಟಿದ ಎಲ್ಲೆಲ್ಲಿ ಬೆಳೆದ ಯಾವದು ತಿಳಿಯದ ಮಹಾವಸ್ತು
ಎಲ್ಲ ಬಲ್ಲಿದ ಎಲ್ಲರ ಬೆರೆದ ವಿಷ್ಣು ಪೈಗಂಬರ ಶಿವವಸ್ತು
ಶ್ರೀ ಶೈಲದ ಕದಳಿ ಬನದಿಂದ ಬಂದ ಮಲ್ಲಯ್ಯ ನಿಜವಸ್ತು
ಮಲ್ಲಿಕಾರ್ಜುನ ಸ್ವಾಮಿ ಸಮರ್ಥನ ಪುರವಿದು ಶುಭಮಂಗಳಮಸ್ತು

ಹಂಗು ಹರಿದ ಬಳಿಕಿನ್ನೇನು ಲಿಂಗ ಎಂದು ದಿಗಂಬರ ತಾನಾದ
ಮಂಗಲಾಮಂಗಲ ಶುಭಾಶುಭಗಳ ಮೀರಿದ ಶೂನ್ಯದ ರೂಪಾದ
ನಾವು ನೀವು ನೇವಮಾದಿ ದಾಟಿದ ದತ್ತಾತ್ರೇಯನೆಂದ್ಹೆಸರಾದ
ಭಸ್ಮ ಗಂಧ ತಿಲಕಾದಿ ಹಚ್ಚುದ ಆರೂಢನಾಗಿ ತಾ ಮೆರೆದ ॥

ಕುರುಡನಿಗೆ ಕಣ್ಣಿತ್ತು ಬ್ರಾಹ್ಮಣರ ಸೊಕ್ಕನು ಮುರಿಸಿದ ಅವನಿಂದ
ಮರುಗೋಡದೆ ಪಾಯಸದ ಕಡಾಯಲಿ ಬಿದ್ದು ಸತ್ತವನ ಬದುಕಿಸಿದ
ಪ್ರಸಾದ ಅಕ್ಷಯಗೊಳಿಸಿ ಸಹಸ್ರಾರು ಜನರಿಗೆ ಉಣಿಸಿದ ಮುದದಿಂದ
ಅಸಮ ವಟವೃಕ್ಷ ಮಠದಲಿ ಭಕ್ತರ ಸೇವೆಯ ಪಡೆವನು ನಲುವಿಂದ

ನೀರು ಇಲ್ಲದ ಭಾವಿಯ ತುಂಬ ನೀರ ತಂದ ಗಂಗಾಧರನು
ಸಾರಿ ಭಜಿಸಿದ ಬಡವಗೆ ಹಾವನು ಚಿನ್ನ ಮಾಡಿತ್ತ ಸಿರಿವರನು

ಭಜಿಸುವ ಭಕ್ತರ ಬಲ್ಲೆ ತಾನಿದ್ದು ಸಲಹುವ ಸರ್ವಾಂತ
ನಿಜದೆ ಶ್ರೀಗುರು ಮಂದಿರ ಮಠದೆ ಲೀಲೆ ತೋರುವ
ಮಹಾಸ್ವಾಮಿ ॥
ಔಲಿಯ ಸಯ್ಯದ ಬಾಬಾನಿಗೆ ದರ್ಶನವಿತ್ತು ಉದ್ಧರಿಸಿದನು
ಜೋಳಪ್ಪನ ಪೂಜೆಯಕೊಂಡು ಶ್ರೀಬಾಳಪ್ಪಗೆ ಕೃಪೆ ಮಾಡಿ
ಬೋಸ್ಲೆ ರಾಜರ ಭಕ್ತಿ ಸೇವೆಗೆ ಮೆಚ್ಚುತ ಆಸೀರ್ವದಿಸಿದನು
ಎಲ್ಲರ ಸಲಹುತ ಜಾಗ್ರತನಾಗಿ ಸಮಾಧಿ ಮಠದಲಿ ಮೆರೆಯು

೪

## ನಾಡ ದೇವಿಗೆ

ರಾಗ:=ಹಂಸಧ್ವನಿ

ತಾಲ:- ತೀನ

ನಾಡದೇವಿಗೆ ನಮನ
ಕನ್ನಾಡ ತಾಯಿಗೆ ನಮನ ॥
ರನ್ನ ಪಂಪ ಹರಿಹರ ವಿರುಪಾಕ್ಷ । ಸರ್ವಜ್ಞ ಷಡಕ್ಷರ ರಾಘವಾ
ಚನ್ನ ಕವೀಂದ್ರ ಬೇಂದ್ರೆ ಕುವೆಂಪು । ಕನ್ನಡ ಕಾವ್ಯದ ಸೊಂಪಿನ
ಪೆಂಪಿನ ॥
ಮುತ್ತು ರತುನ ಮಾಣಿಕ್ಯದ ರಾಶಿ । ಬಿತ್ತಿ ಬೆಳೆದ ಸಂಪತ್ತಿನ ರಾಶಿ
ಕಿತ್ತೂರ ಕೆಳದಿ ಹಂಪೆ ಬನವಾಸಿ । ಕಲ್ಯಾಣ ಮೈಸೂರ ರಾಜ್ಯ
ಸಂಪತ್ತಿನ ॥
ಬಸವಾದಿ ಶರಣ ಶ್ರೀಸಂಕುಳಕೆ । ಅಸಮ ಪುರಂದರ ದಾಸ ಬಳಗಕೆ
ಎಸೆವ ಪಂಚಾಕ್ಷರಿ ಗಾನದೈಸಿರಿಗೆ । ಹೆಸರಾಗಿ ಮೆರೆದ ಅಮರ ಶ್ರೀಕನ್ನಡ
ವೀರಭದ್ರ ಹನುಮಂತರ ಕ್ಷೇತ್ರ । ನಾರದ ಭರತಮುನೀಶ್ವರ ಪಾ
ಜಕ್ಕಣ ಡಕ್ಕಣ ಶಿಲ್ಪಚಿತ್ರ ಮೇಣ್ । ಲಲಿತಕಲಾ ಸಂಗಮವಿದು ಪವಿತ್ರ
ಬಾದಾಮಿ ಬೇಲೂರು ಶಿಲ್ಪದ ಜಾಡು । ರೇಣುಕ ದಾರುಕ ಕಲಿವೀರರ ಬೀ
ಚಾಮುಂಡಿ ಬನಶಂಕರಿ ಎಲ್ಲಮ್ಮರಾದಿ ಶಕ್ತಿಪ್ರಭಾ ಪೂರ್ಣಮೆ ಗೂಡಿದು

೦

# ಅಂಕಲಗಿ ಅಡವೀಶ

ರಾಗ:-ಭೀಮಪ್ಲಾಸ ತಾಲ:-ಝಪ್ತಾಲ

ಅಂಕಲಗಿ ಅಡವೀಶ । ಅಕಳಂಕ ಅವಿನಾಶ
ಅಂಕಗುಣಿವಕೆ ಮೀರಿದ । ಶೂನ್ಯಮಯ ಪರಮೇಶ ॥

ಹನ್ನೆರಡನೆಯ ಶಕದ ರೇಚಾರ್ಯ ಗಣಸೀತ
ಚನ್ನಬಸವಾಲ್ಲಮ ಶ್ರೀಬಸವರ ಸಮನೀತ
ಶೂನ್ಯ ಸಿದ್ಧಾಂತವನು ಎಲ್ಲೆಡೆಗೆ ಪಸರಿಸುತ
ಅಂಕಲಗಿಯೊಳು ನೆಲೆಸಿದಾತ ಅಡವಿ ತಾತ ॥

ಏಳ್ನೂರು ವರುಷ ಬಾಳಿದ ಅಡವಿ ಶಿವಯೋಗಿ
ಎಲ್ಲ ತೀರ್ಥ ಸುಕ್ಷೇತ್ರ ದರ್ಶಿಸಿದ ಶೈವ ರಾಗಿ
ಬಲ್ಲಿದಾ ಭಕ್ತರಿಗೆ ಸಲ್ಲೀಲೆಯೋಳ್ ಹರಸಿ
ಎಲ್ಲರನು ಸಲಹಿದ ಪರಮ ದೀರ್ಘಾಯುಷಿ ॥

ಮಕ್ಕಳನು ಕರುಣಿಸುತ ಬಂಜೆಯರ ಪೊರೆದಿಹನು
ಮುಕ್ಕ ಮಗಿಯಿಂದಮೃತದಂಬಲಿಯನುಣಿಸಿದನು
ಬಡವರಿಗೆ ಸಿರಿಯಿತ್ತು ಗರ್ವಿಗಳ ಮಣಿಸಿದನು
ಅಡಿಗಡಿಗೆ ನೆನೆವವರ ಎಡಬಿಡದೆ ಪೊರೆದಿಹನು ॥

ಮಳೆ ಬರಿಸಿ ಬೆಳೆ ಬೆಳೆಸಿ ಹೊಳೆ ದಾಟ ತಾ ಮೆರೆದ
ಭೂತ ಪ್ರೇತಾದಿಗಳ ಕಾಟ ತಪ್ಪಿಸುತ ಪೊರೆದ
ರೋಗಿಗಳ ಸಲಹಿದನು ಯೋಗಿಗಳ ಹರಸಿದನು
ಮೈಸೂರು ಸಾಂಗ್ಲಿ ಅರಸರ ಭಕ್ತಿಗೊಲಿದಿಹನು ॥

ಕುರುಡರಿಗೆ ಕಣ್ಣಿತ್ತು ಹೆಳವರಿಗೆ ಕಾಲಿತ್ತು
ಬರಡಾಕಳವ ಕರೆದ ಮೂಕಂಗೆ ಬಾಯಿ ಯಿತ್ತು
ಅಥಣಿ ಶಿವಯೋಗಿಗೊಲಿದು ದರ್ಶನವಿತ್ತು
ಹರ ಭಕ್ತರೆಲ್ಲರನು ಸಲಹಿ ಸಿದ್ಧಿಯನಿತ್ತು ॥

## ಮಹಾಲಿಂಗ

ರಾಗ:-ಭೂಪಾಲಿ ತಾಲ:-ದೀಪಚಂ

ಮಹಾಲಿಂಗ ಸಂಗ । ಪೊರೆಯೊ ಪ್ರಭುಲಿಂಗ
ಮಹಾಲಿಂಗ ಪುರದ ಗುರು ಜಂಗಮ ಲಿಂಗ ॥
ನಗಗಟ್ಟಿ ಹರಗಟ್ಟಿಗೈದ ಮಹಾಲಿಂಗ
ಚರಿಸಿ ಶಿವ ಮತವನುದ್ಧರಿಸಿದ ತುಂಗ
ವರಭಕ್ತರ ನೀನು ಸತತ ಪೊರೆಯುವೆ ತಂದೆ
ನರಗಟ್ಟಿ ಮಹಾಲಿಂಗ ಪುರವಾಯ್ತು ನಿನ್ನಿಂದೆ ॥
ನಿಷ್ಠೆಯಿಂ ಭಜಿಸಿದರೆ ಕಷ್ಟಗಳ ನೀ ಕಳೆವೆ
ಕುಷ್ಟ ರೋಗಿಗಳ ಉದ್ಧರಿಸಿ ನೀ ಪೊರೆವೆ
ಶ್ರೇಷ್ಟ ಶಿವಯೋಗಿ ದುರದುಂಡೀಶನೊಡನೆ
ತುಂಬಿ ಹರಿಯುವ ನದಿಯ ದಾಂಟಿ ನೀ ಮೆರೆದೆ ॥
ಮುಧೋಳದ ರಾಜನಿಗೆ ಹರಕೆಯ ನೀ ಕೊಟ್ಟೆ
ಮುದದಿಂದ ಬಡವರಿಗೆ ಸಿರಿತನವನಿತ್ತೆ
ಮಕ್ಕಳಿಲ್ಲದ ಜನಕೆ ಸಂತತಿಯ ಕೊಟ್ಟೆ
ಸಕಲ ಭಕ್ತರ ಪೊರೆದೆ ಮಹಾಲಿಂಗ ಗುರುತಂದೆ ॥
ಶುದ್ಧ ಭಕ್ತಳು ತಾಯಿ ಸಿದ್ಧಾಯಿಗೊಲಿದೆ
ಇಂದು ಮುಂದೆಂದು ಇರುವೆನೆಂದ್ಹೇಳಿದೆ
ಜಡೆ ಬೆಳೆಯುತಿದೆ ಅದರೊಳಗೆ ನೀನಿರುವೆ
ಮಹಾಲಿಂಗ ಗುರು ಪೂಜ್ಯ ನೆನೆವವರ ಕಾಯುವೆ ॥ ೦

## ಯಡೆಯೂರ ಕ್ಷೇತ್ರ

ರಾಗಃ-ಮಿಶ್ರ ನಾರಾಯಣಿ
ತಾಲಃ-ಕೆಹರವ

ಎಡೆಯೂರ ಕ್ಷೇತ್ರ ಪರಮ ಪವಿತ್ರ ನೋಡಾಕ ಹೋಗೂಣು
ಸಿದ್ಧಲಿಂಗ ಶಿವಸಿದ್ಧ ಕೈಲಾಸ ಕಂಡು ಕೈ ಮುಗಿದು ಬಾಗೋಣ
ಜೋತಿರ್ಮಯದ ಮೂರ್ತಿ ಗುರುಸಿದ್ಧಲಿಂಗನ ಶ್ರೀ ತಾಣ
ಜಾತಿ ವಿಜಾತಿಗಳೆಣಿಸದೆ ಸರ್ವರ ಪೊರೆಯುವ ಸಮತಾ ಗುರು ತಾಣ

ಸ್ತೋತ್ರ ಮಾಡಿದರೆ ಜೀವನ ಪಾತ್ರ ಸುಸೂತ್ರಗೊಳಿಸುವ ಶುಭ ತಾಣ
ಸತ್ಪಾತ್ರ ದಾನಿ ಸುಪವಿತ್ರ ಜ್ಞಾನಿಗಳ ಸಲಹುವ ಜಾಗ್ರುತ ತಾಣ
ಭಕ್ತಿಯಿಂದ ಭಜಿಸೆರಗಿದರೆ ಮುಕ್ತಿ ಕೊಡುವ ಪ್ರತ್ಯಕ್ಷ ಶಿವ ತಾಣ ||

ಪೆದ್ದ ಜೀವರು ಭವಕೆ ಬದ್ಧರು ನಾವು ಬಂಹೆದಿವು ಎಂದು
ಸಿದ್ಧರ ಸಿದ್ಧ ಶ್ರೀಗುರು ಸಿದ್ಧಲಿಂಗತಂದೆ ಕಾಪಾಡೆಂದು
ಒದ್ದೆಯಾಗಿ ಎಡೆಯೂರ ಗುಡಿಗೆ ನೀ ಶುದ್ಧಮನದಿ
ನೆನೆಯುತ ಬಾಗು ||

ಸಿದ್ಧ ಸಮಾಧಿಯಿಂದೆದ್ದು ಕಣ್ತೆರೆದು ಕರುಣೆಯಿಂದ ತಾ ನೋಡ್ತಾನ
ಮುದ್ದು ಮಕ್ಕಳೆಂದೆತ್ತಿ ಉದ್ಧಾರ ಮಾಡಿ ದಿನದಿನ ಕಾಯ್ತಾನ ||

ಎಣ್ಣೆ ಇಲ್ಲದೆ ದೀಪ ಬೆಳಗಿಸಿ ಗುರುಸೇವೆಯಲ್ಲಿ ಬೆಳದಾನ
ಕಲ್ಲು ಬಸವ ತಾ ಚೇತನತುಂಬಿ ಪ್ರಸಾದುಣ್ಣುವ ಲೀಲೆ ತೋರ್‍ಯಾನ
ಗುಡ್ಡದೆ ಒದ್ದು ಸಿದ್ಧಗಂಗೆಯ ತೋರಿ ಮಹಕ್ಷೇತ್ರ ಮಾಡ್ಯಾನ
ಕೆಗ್ಗೆರೆಯಲಿ ತಪ ಮಾಡಿ ವಾಲ್ಮೀಖಧಾರಿ ತೋಂಟದಾರ್ಯನಾಗ್ಯಾನ
ಮುಗ್ಧ ವೃದ್ಧೆಯ ಎಡೆಯ ಸೇವಿಸಿ ಎಡೆಯೂರಾಗಿಸಿ ಹರಸ್ಯಾನ ||

ನಾಡು ವಿಜಯದ ನಗರವಾಸಿ ಹರತತ್ವಹಂಪೆ ಬೆಳಗ್ಯಾನ
ನೂರೊಂದು ವಿರತರ ಕೂಡಿ ವೀರಶೈವದ ಧ್ವಜವೆತ್ತಿ ಹಾರಸ್ಯಾನ
ಷಟ್‌ಸ್ಥಲ ಸಂಪದ ವಚನವ ಹಾಡಿ ಕನ್ನಡ ವಾಙ್ಮಯ ಬೆಳಿಸ್ಯಾನ
ಬಸವ ಭಕ್ತಿಯ ಅಲ್ಲಮ ಶಕ್ತಿಯ ಜನಮನದಲ್ಲಿ ತುಂಬ್ಯಾನ
ಚರಂತ ಮಹಾಂತ ಜಂಗಮ ಸಿದ್ಧರ ಸಂತತಿಗೆ ಬೆಳಕಾಗ್ಯಾನ ||

ಗುರುಲಿಂಗ ಜಂಗಮ ತ್ರಿಕೂಟ ಪ್ರಾಣ ಮನ ಭಾವದಲ್ಲಿ ನೆಲಿಸ್ಯಾನ
ಲಿಂಗಜಂಗಮ ತೆಂಗಾಯಾಗಲು ಎಡೆಮಾಡಿಕೊಂಡು ಉಣತಾನ
ಸಾಂಬ ತತ್ವದ ಡಿಂಬಳ ಡಂಬಳ ದೇಹಪಾದದಲ್ಲಿ ಇರತಾನ
ಗುಗುತತ್ವದ ಗದ್ದಿಗೆ ಗದಗಲಿ ಗುರುವಾಗಿ ಲೀಲೆ ಮೆರಿತಾನ
ಇಲ್ಲಿ ಅಲ್ಲಿ ಎಲ್ಲಲ್ಲಿ ತುಂಬಿ ಎಡೆಯೂರ ಪ್ರಭುಲಿಂಗ ನೆಲಿಸ್ಯಾನ ||

—೦—

# ಬಸವ ಭಗವದ್ಗೀತೆ

ರಾಃಗ-ಮಧ್ಯಮಾವತಿ ತಾಲಃ-ಖಪಾಲಿ

ಬಸವನ ಚರಿತೆ । ಅಸಮ ಪಾವನತೆ
ವಿಶ್ವ ಉಗ್ಗಡಿಸುವ ಶುಭಗೀತೆ
ಹಾಡು ಶ್ರೀಬಸವ ಭಗವದ್ಗೀತೆ ॥

ಎತ್ತಿಹಿಡಿವುದೆ ಧರ್ಮದ ಪಾಲ್ಯೆ । ಇಂಬಿಟ್ಟುಕೊಳ್ಳದೆ ಧರ್ಮ ಶ್ರೀರಕ್ಷೆ
ಧರ್ಮಪುರುಷನ ಪಟ್ಟವಾ ನಂದಿಗೆ । ಆ ಪಟ್ಟ ಹನ್ನೆರಡನೆಯಶತಮಾನ
ಬಂದಿತು ಕಲ್ಯಾಣ ಬಸವಪ್ಪನಿಗೆ । ಅಂತೆ ನಂದಿ ಅವತಾರೆಂದರವಗೆ ॥

ಮರ್ತ್ಯದ ಬಳಲುವ ಮನುಜರಿಗೆ । ಕರ್ಮದಿ ಬೇಯುವ ದುರುಳರಿಗೆ
ಪಾಪದಿ ಹೊರಳುವ ಪತೀತರಿಗೆ । ಎತ್ತುದ ಬಿರುದು ಬಸವಣ್ಣನಿಗೆ
ಎತ್ತು ಬಸವ ನನ್ನೆತ್ತು ಬಸವನೆ । ಎಂದರೆ ಅವನೆತ್ತಿಕೊಳುವನು ನಿಜದೆ ॥

ಭುವಿಯೊಳಡಗಿದ ಫಲರಾಶಿಗಳನೆ । ಎತ್ತಿಕೊಡುವ ಹಸು ಹೋರಿಗಳಿಗೆ
ಎತ್ತುಗಳೆಂದು ಹಾಡಿದನವ ರೈತ । ಎತ್ತು ಎಂದರೆ ಕೃಷಿಧರ್ಮಶ್ರೀದೀಪ
ಆ ದೀಪ ಬಸವನ ಪ್ರತಿರೂಪ । ಎಂದು ಮೆರೆಸುತಿದೆ ರೈತ ಪ್ರತಾಪ ॥

................

# ಆರಿಸಿ ನೋಡೋದು

ರಾಗ:-ಸಾರಂಗ ತಾಲಃ-ದಾದರಾ

ಆರಿಸಿ ನೋಡೋದು ಬಹಳೈತಿ ! ಜಗದಾಗ
ಆದರ್ಶ ಕಾಣೋ ಜನ ಸ್ವಲ್ಪೈತಿ ॥
ಶ್ರೇಷ್ಠ ಜನರ ಬಾಳಿನಲಿ ಆದರ್ಶ ಪಾಠೈತಿ
ಅದನು ತಿಳಿದು ಕಲಿಯೋದು ಮುಖ್ಯೈತಿ ॥

ಬೀಸುವಂಥೆ ಗಾಳಿಯಲ್ಲ ಪ್ರಾಣವಾಯುವಲ್ಲ
ಎಲ್ಲ ಗೋಮಯವು ಭಸ್ಮ ಕಲ್ಪವಾಗೋದಿಲ್ಲ
ಗೋಡಿ ಕಟ್ಟಿಸುವರೆಲ್ಲ ವಿಶ್ವೇಶ್ವರಯ್ಯರಲ್ಲ
ಮಂತ್ರಿ ಮಾನ್ಯರೆಲ್ಲ ಲಾಲಬಹದ್ದೂರ ಶಾಸ್ತ್ರಿಯಂತಿಲ್ಲ

ಮಂತ್ರ ಜಪಿಸೋರೆಲ್ಲ ಮಂತ್ರಾಲಯದ ರಾಯರಲ್ಲ
ದಾನಮಾಡುವವರೆಲ್ಲ ಅನ್ನದಾನಿ ಪ್ರಭುವಲ್ಲ ॥

ಗಾಜಿನಾಭರಣ ಮಿಂಚಿದರೇನು ಮುತ್ತಲ್ಲ
ಕಾಡ್ಗಿಚ್ಚಿನ ಉರಿಯೆಲ್ಲ ಕಾರ್ತಿಕೋತ್ಸವವಲ್ಲ
ವೇಷಗಾರರೆಲ್ಲ ಕಿನ್ನರರು ಕಿಂಪುರುಷರಲ್ಲ
ಸತಿ ಸುತರನು ಬಿಟ್ಹೋದವರೆಲ್ಲ ಬುದ್ಧರಾಗೋಲ್ಲ
ತಟ್ಟೆಸುಟ್ಟವರೆಲ್ಲ ಬಸವಾದಿ ಶರಣರಾಗುವದಿಲ್ಲ ॥

ಬೆಳೆದು ಬಂದ ಪೈರೆಲ್ಲ ಕಾಳಾಗೋದಿಲ್ಲ
ಸ್ವಾತಿಯ ಮಳೆಹನಿಯೆಲ್ಲ ಮುತ್ತಾಗೋದಿಲ್ಲ
ಹೊಗೆಯೆಲ್ಲ ಧೂಪವಲ್ಲ ಅದು ಮೇಘವಾಗೋಲ್ಲ
ಜೈಸಿ ಆಕಳ ಹಾಲು ಬಹಳಹುದು ರುಚಿಯಲ್ಲ
ರಾಜಕಾರಣಿಗಳೆಲ್ಲ ಜಯಪ್ರಕಾಶರಂತೇನಲ್ಲ
ಸ್ವಾಮಿಯಾದವರೆಲ್ಲ ಮಹಾಂತಪ್ರಭುವಾಗ್ಲಿಲ್ಲ ॥

ಭುವಿಯ ಮಣ್ಣು ಹರಳೆಲ್ಲ ಚಿನ್ನ ತಾಮ್ರ ಲೋಹಲ್ಲ
ಹುಟ್ಟಿ ಬೆಳೆದ ಮರಗಳೆಲ್ಲ ಕಲ್ಪವೃಕ್ಷವೇನಲ್ಲ
ಶಿಕ್ಷಕರಾದವರೆಷ್ಟೋ ರಾಧಾಕೃಷ್ಣರಂತಿಲ್ಲ
ಗೊಲ್ಲರೆಲ್ಲ ಶ್ರೀಕೃಷ್ಣನಂತೆ ಪೂಜೆಗರ್ಹರಲ್ಲ
ಕುರುಡರೆಲ್ಲ ಪಂಚಾಕ್ಷರಿ ಪುಟ್ಟರಾಜ ಗುರುವಲ್ಲ
ಕಿರೀಟ ಹಾಕಿದವರೆಲ್ಲ ಪಂಚಾಚಾರ್ಯರಾಗೋಲ್ಲ ॥

ಬೆಳೆದ ಬಿದಿರ ಪಡೆಯೆಲ್ಲ ಬಿಲ್ಲಾಗೋಧಿಲ್ಲ
ಕುಂಬಳ ಕಾಯಿಗಳೆಲ್ಲ ತಂಬೂರಿಗಾಗೋಲ್ಲ
ನಾಟಕ ನಟರೆಲ್ಲ ಹಂದಿಗನೂರ ಸಿದ್ರಾಮಪ್ಪನಲ್ಲ
ಕೋತಿ ಮಂಗಗಳೆಲ್ಲ ಸಮುದ್ರ ಹಾರೋದಿಲ್ಲ
ಕುರುಬರೆಲ್ಲ ಗೊಲ್ಲಾಳ ಮೈಲಾರ ಕಾಳಿದಾಸರಲ್ಲ
ವಿರಕ್ತರೆಲ್ಲ ಹಾನಗಲ್ಲ್ ಕುಮಾರಸ್ವಾಮಿಯಾಗೋಲ್ಲ ॥

ಹಚ್ಚಿದ ದೀಪಗಳೆಲ್ಲ ದೇವ ನಂದಾದೀಪಲ್ಲ
ಅರಳಿದಂಥ ಹೂವೆಲ್ಲ ಸುಗಂಧಭರಿತವೇನಲ್ಲ
ಬೆತ್ತಲೆ ಇದ್ದವರೆಲ್ಲ ಜಿನ ಬಾಹುಬಲಿಯಲ್ಲ
ಸ್ತ್ರೀಯರೆಲ್ಲ ಸೋಲಾಪುರದ ಶರಣಮ್ಮರಾಗೋಲ್ಲ
ತಪವ ಮಾಡಿದವರೆಲ್ಲ ಯಡೆಯೂರ ಸಿದ್ಧಲಿಂಗರಲ್ಲ
ಮಠದಯ್ನೋರೆಲ್ಲ ಕಲಿಪುರೇಶ ಖಾಸಯ್ಯರಲ್ಲ ॥



## ಸಿದ್ಧಲಿಂಗನ ಲೀಲೆ

ರಾಗಃ-ಮಿಶ್ರ ತಾಲ:=ಖವಾಲಿ

ಸಿದ್ಧಲಿಂಗನ ಲೀಲೆ । ಸಿದ್ಧಿಸಲಿ ನಿನ್ನಲ್ಲೆ
ಅದಕಾಗಿ ಭಜಿಸು । ಗುರುಸಿದ್ಧನೊಲಿಸು ॥
ಎಡೆಯೂರ ಪುರವಾಸಿ ದೇವ । ಶ್ರೀ । ಎಡೆಯೂರ ಪುರವಾಸಿದೈವ
ಕಡುಭಕ್ತರ ಮನದೆ ಇರುವ । ದೃಢ ಮನದ ಕರೆಗೋಗೊಡುವ
ದಿಡಗಿಲಿ ಬಂದು ತಾ ನೋಡುವ । ಮಡಿಭಾವದೆಡೆಯ ಸ್ವೀಕರಿಸಿ ऽ
ಬೆಂಬಿಡದೆ ನಮ್ಮನ್ನು ಪೊರೆವ । ಅಡಿಗಡಿಗೆ ಜೊತೆಗೂಡಿ ಇರುವ ॥
ಕಾಯ ಕಾಂತಾರ ಹಸನಿರಿಸಿ । ಈ ।ಕಾಯಕಾಂತಾರಹಸನಿರಿಸಿ
ಕಾಯದ ಶ್ರೀತೋಟ ರಚಿಸಿ । ಭಕ್ತಿ ಬಿನ್ನಹ ಮಾಡಿ ಎರಗಿ
ಕರೆದಾಗ ಸಿದ್ಧಲಿಂಗಸ್ವಾಮಿ । ಬರತಾನ ಇರತಾನ ಇಲ್ಲಿ ऽ
ಆಗಾತ್ಮ ಸಿದ್ಧಾತ್ಮನಾಗಿ । ಈ । ದೇಹ ಬೆಳಗುವದುಲಿಂಗಾಂಗಿ॥
ದೇಹವೆ ಹುತ್ತಾದವೇಲೆ । ಈ । ದೇಹವೆ ಹುತ್ತಾದವೇಲೆ
ಆತ್ಮ ಕಲಾಗಮನ ಕಪಿಲೆ । ಜ್ಞಾನದ ತೊರೆ ತುಂಬಿ ತಾನೆ
ಅರಿವಿನಮೃತ ಧಾರೆ ಹುತ್ತಿಗೆ । ತನು ಮರವೆ ಕರಗಿ ಹೋಗಲ್ಕೆ ऽ
ಗುರುಸಿದ್ಧಲಿಂಗ ತಾ ಕಾಂಬ । ನೋಡಿ ಮಾತಾಡುವನು
ಗುರುಸಾಂಬ ॥

ನಂಬಿದ ಜೀವ ನಂಬೆಣ್ಣ । ನಿಜ । ನಂಬಿದ ಜೀವ ನಂಬೆಣ್ಣ
ಬಿನ್ನಹಕಾತ ಅಣಿಯಣ್ಣಾ । ಇಂದಿನ ಅಡಿಗೆ ಬೇಡೆನುತೆ
ಅಂದಿನ ಅನುಭಾವದಡಿಗೆ । ಬೇಕೆಂದು ಸಿದ್ಧಲಿಂಗನುಂಡ s
ಕಂದಜೀವರ ತಾನೆ ಪೊರೆವ । ತಂದೆ ತಾಯಾಗಿ ಕಾಪಾಡುವ ॥

................

## ಗುಹೆಯೊಳು ಗುರು

ರಾಗ:-ಭೂಪ ತಾಲ:-ಖವಾಲಿ

ಗುಹೆಯೊಳು ಗುರುವನ್ನು ಕಂಡೆನು ಕಂಡೆನು
ಗುರು ಗುಹೇಶ್ವರನ ನಿಜಕಂಡೆನು ಕಂಡೆನು ॥

ಭಸ್ಮಧರ ಭಸಿತಾಂಗ ನಿಸ್ಸಂಗಿಯ ಕಂಡೆನು
ಭಸಿತದಲ್ಲಿ ಭಸ್ಮಾದ ಭಸ್ಮಾಂಗಿಯ ಕಂಡೆನು
ಭಸ್ಮದ ಬೆಳ್ಪಿನಲಿ ರೂಪಾದ ದೇಹದಲಿ
ಭೂತೇಶ ಶಿವ ವಿಭೂತೀಶ್ವರನ ಕಂಡೆನು ॥

ಬೆಳ್ದಿಂಗದ ಮೇಲೆ ಬೆಳ್ದಿಂಗಳಾ ಬಿಂಬ
ತಿಂಗಳದ ಪ್ರತಿಬಿಂಬದಂತೊಪ್ಪಿದ ಅಂಗ
ಅಲ್ಲಿ ಬೆಳಗಿನ ಬಳ್ಳಿ ರತ್ನದಮರಾಳಿ ಬೆಳ್ಳ್
ಸುಳ್ಳಿಯಂತೊಪ್ಪಿದ ಕಣ್ಣ್ಣಕಾಂತಿರ್ಮಯನ ॥

ಕತ್ತಲೆಯ ಗೂಡಿನಲಿ ಕಾಳಿಕೆಯ ಕಳೆಯುತಲಿ
ಎತ್ತಿ ಬೆಳಗೆಲೆ ಸ್ವಾಮಿ ತಪಃಪ್ರಭೆಯೆರಚುತಲಿ
ನೀನೆ ಗತಿ ಮತಿಯೆಂದು ಬೇಡಿಕೊಂಡೆರಗುವೆನು
ಅಲ್ಲಮನ ಬಾಳ್ಬೆಳಗು ಗುಹೇಶ್ವರ ಲಿಂಗವೆ !!



# ಉಳುವಿ ಕ್ಷೇತ್ರ

ರಾಗ-ಭೈರವಿ                ತಾಲ-ದಾದರಾ

ಚನ್ನಬಸವೇಶನ ಉಳುವಿ ಕ್ಷೇತ್ರ
ಕನ್ನಡಕೆ ಹೆಸರಾದ ಸುಕ್ಷೇತ್ರ । ಪಾವನ ಕ್ಷೇತ್ರ ॥

ಕನ್ನಡದ ಕಾಶ್ಮೀರ ಉಳುವಿಗೆ ನೀ ಬಾರ
ಕಂದಕ ಗವಿ ಗಿರಿಸಾಲು ವನರಾಶಿ ನೋಡ
ಲಿಂಗ ಧರ್ಮ ಕೀರ್ತಿ ಜಗದ ತುಂಬ ಮೆರೆಯಿಸಿದ
ಚನ್ನಬಸವನೈಕ್ಯಸ್ಥಲ ಜಾಗ್ರುತ ನೆಲೆವೀಡ ।
ಉಳುವಿ ಕ್ಷೇತ್ರ ನೋಡ ॥

ಧೀರ ಗುರುವೆ ಕಲ್ಯಾಣದಿ ಶರಣ ಗಣರಿಗೆಲ್ಲ
ಸಾರ ಷಟಸ್ಥಲ ತತ್ವ ಬೋಧಿಸುತ ಮೆರೆಯುತ
ವೀರಘಂಟ್ಯೆ ಮಡಿವಾಳೇಶ್ವರ ಮಾಚಯ್ಯನೊಡನೆ
ಸರಂಕ್ಷಿಸಿ ಶರಣರುಳುವೆ ಗೈಸಿ ಐಕ್ಯಾದಾತ ।
ಲಿಂಗೈಕ್ಯ ನಾದಾತ

ಚನ್ನಬಸವ ಸಮಾಧಿ ಮಂದಿರ ಭವ್ಯ ಸುಂದರ
ಚನ್ನಮಲ್ಲಿಕಾರ್ಜುನ ಬಸವಣ್ಣ ಸಂಗಮೇಶ್ವರರ
ಕಂಡು ಬಾಗು ಮತ್ತಾಕಳ ಗವಿ ವಿಭೂತಿ ಕಣಜಗಳ
ಚಿಲುಮೆ ಹೊಂಡ ಮಹಾಮನೆಗಳ ಅಲೆದಾಡಿ ನೋಡು ।
ನಲಿದಾಡಿ ಕೊಂಡಾಡು

ಅಂದು ಹರನ ಅಪ್ಪಣೆಯಿಂ ನಂದಿ ಧರೆಗೆ ಬಂದ
ಲಿಂಗ ಬಸವ ಗುರು ಬಸವ ಕಂಠಿ ಬಸವ ಕರಿಬಸವ
ಚನ್ನಬಸವ ನಾಮದಿಂದ ಜಗವ ತುಂಬಿ ಬೆಳಗುವ
ಲಿಂಗ ಬೆಳಗಿನುಳುವೆ ನಂದಿ ಕಾರ್ಯಕ್ಷೇತ್ರವರಿಯೆ
ಉಳುವಿಗೆ ನೀ ಬಾರೊ

ಧಾರವಾಡದಪ್ಪ ಮೃತ್ಯುಂಜಯ ಮಹಾಂತಪ್ಪಗಳು
ವೀರ ಜಂಗಮಮೂರ್ತಿ ತ್ರಿವಿಧ ದಾಸೋಹಿಗಳು
ಸಾರಿ ಬಂದು ಉಳವಿಕ್ಷೇತ್ರ ವೃದ್ಧಿಸಿಹರು ನೋಡು
ತೇರನೆಳಿಸಿ ಜಾತ್ರೆ ಮಾಡುತಿಹರು ಬಂದು ಬಾಗು ।
ಪುಣ್ಯಭಾಗಿಯಾಗು ॥



## ಏನೆಲ್ಲ ಹೌದೆಂದು

ರಾಗ:-ಕಲಾಶ್ರಿ ತಾಲ:-ದಾದರಾ

ಏನೆಲ್ಲ ಹೌದೆಂದು ಗೋಣು ಹಾಕುವ
ಕಾಲೆತ್ತು ನೀನಾಗಬೇಡ ಜೀವ ।ನೀ॥

ಊರಿಗೆ ಹಲವು ದಾರಿ । ಯಾರು ತೋರಿಸಿದರೂ ಸರಿ
ಎಂದು ಅಡ್ಡ ತತ್ವವನ್ನು ಸಾರಿ ಸಾರಿ
ಹೇಳುವವರು ನಿಜ ಗುರುಸ್ವಾಮಿಗಳಲ್ಲರಿ
ಊರಿಗೆ ಹಲವು ದಾರಿ । ಇಹವು ಸರಿ
ಆದರೆ ಅವುಗಳೆಲ್ಲ ಕಾಡುದಾರಿ ಅರಿ
ಅವುಗಳಲ್ಲಿ ಒಂದೆ ಅಹುದು ಹೆದ್ದಾರಿ
ಆ ಹೆದ್ದಾರಿಯೆ ಪಂಚಾಚಾರ್ಯರ ದಾರಿ! ನಿಜ ದಾರಿ। ಶಿವದಾರಿ॥

ಓದಿ ಓದಿ ಕೆಟ್ಟ ಕೂಚುಭಟ್ಟ । ಏನೆಲ್ಲ ತತ್ವ ಹೇಳುತ ಜುಟ್ಟ ಬಿಟ್ಟ
ನಾನೂ ಗುರ್‍ರು ಗುರುವೆಂದು ಹೇಳುತ ಹೊರಟ
ಶಿಹಿ ಶಿಹಿ ಮಾತಿನ ಮೋಡಿಯ ಮಾಟ-
ಬೀರಿ ಗಳಿಸುವನು ಮುಗ್ಧರ ಚಟದ ಹಣ ಹಣದ ಚಟ
ಆ ಹಣದಿಂದ ಕಟ್ಟಿಸಿದನು ಭಾರೀಮಠ
ನಡೆಸಿಹನು ಪಲ್ಲಕ್ಕೀ ಹತ್ತುವ ಹುಚ್ಚಾಟ
ಈ ನಕಲಿಯಾಟ ನಂಬಬೇಡ ನೀ ದಿಟ
ನಂಬು ಜಂಗಮ ಜಗದ್ಗುರು ಪಂಚಾಚಾರ್ಯರ ಪೀಠ
ಗುರುಪೀಠ ಚರಪೀಠ ॥

ದುಡ್ಡು ಕೊಟ್ಟು ಭಕ್ತರಂ ಮಾಡಿ। ದೊಡ್ಡ ದೊಡ್ಡ ಮಾತುಗಳಲಿ
ಬಡ್ಡಿ ವ್ಯವಹಾರದಲಿ ಶಿವತತ್ವವ ಮಾರಿ
ಜಿದ್ದಿನಿಂದ ಹೊಸದಾಗಿ ಮೆಗೆಯುವವರ ಕಿರಿ ಕಿರಿ
ಈ ಕಿರಿ ಕಿರಿಯಲಿ ದೊಡ್ಡವರಾದವರಲ್ಲ ಪೂಜ್ಯರು
ಪೂಜ್ಯರಿಗೆ ಪೂಜ್ಯರು ಗುರು ಜಂಗಮ ಪಂಚಾಚಾರ್ಯರು ॥
ಅಲ್ಲದ ಆಸೆಗೆ ಬಿದ್ದು । ಸಲ್ಲದ ಸ್ವಾರ್ಥಕೆ ಒಲಿದು
ಕ್ಷುಲ್ಲಕ ಹೊಟ್ಟೆಯ ಪೊರೆವ ಮುಸುರೆಗೆ ತಾ ಕೈಯೊಡ್ಡಿ
ಸುಳ್ಳಿಗೆ ನೀ ಸತ್ಯವೆಂದು ಗೋಣು ಹಾಕಬೇಡ
ಎಲ್ಲದಕ್ಕೂ ಹೌದೆನ್ನುವ ಕೌಲೆತ್ತು ಆಗಬೇಡ
ಖುಲ್ಲರನ್ನು ನೆನೆಯದೆ। ಎಲ್ಲರಿಗೂ ಬಾಗದೆ
ಆಚಾರ್ಯ ಜಂಗಮರಿಗೆ ಬಾಗುವ ನಂದಿ ನೀನಾಗು ।
ನಿಜಎತ್ತು ನೀನಾಗು । ನಿಜಭಕ್ತ ನೀನಾಗು ॥



## ಪ್ರತ್ಯಕ್ಷ ಕಂಡರೂ

ರಾಗ:=ಮಾಲಕೌಂಷ

ತಾಲ:–ಕೆಹರವಾ

ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡು । ನೀ
ಕೇಳು ಹಿರಿಯರ ಗಾದೆಯ ಮಾತಿದು ॥
ಕಂಡದ್ದೆಲ್ಲ ನಂಬುವ ಜನರು ದಾರಿ ತಪ್ಪೋದು ಕಂಡು
ಮುಂಗಲಿ ಕೊಂದ ತಿಳಿಗೇಡಿ ಎಲ್ಲವ್ವ ಕಥೆ ನೆನಪಾಗುವದು ॥
ಬೆಳ್ಳಗಿದ್ದದ್ದೆಲ್ಲ ಹಾಲೆಂದು ನೀ ಯಾರಿಗೂ ಮೋಸ ಹೋಗದಿರು
ಬಳ್ಳಿಗುರುಡರು ಕೂಡಿ ಹಳ್ಳವ ಬಿದ್ದಂತೆ ನೀನು ಬೀಳದಿರು
ಧರ್ಮದ ಸೋಗಿಲೆ ಮೆರೆಯುವ ಹೊಸ ಹೊಸ ಗುರುಗಳ ಆಟ
ನಂಬದಿರು
ನಿಜವನ್ನರಿಯುವ ನಿಜವನ್ನಳೆಯುವ ತಿಳಿಗಣ್ಣುಳ್ಳವ ನೀನಾಗು
ಇಲ್ಲದ್ದು ನಡೆತೈತಿ ಆಗದ್ದು ಆಗತೈತಿ ಅದನರಿಯುವ ಜಾಣ
ನೀನಾಗು ॥

ಪೃಥ್ವಿಯ ತುಂಬ ಇರುವ ಮಣ್ಣೆಲ್ಲ ಫಲವತ್ತಾದುದೇನಲ್ಲ
ಸುತ್ತೆಲ್ಲ ಹರಿಯುವ ಹಳ್ಳ ಹೊಳೆ ಭಾವಿ ನೀರೆಲ್ಲ ಶಿಹಿ ನೀರಲ್ಲ
ಬಹಳ ಓದಿದ ಪಂಡಿತರೆಲ್ಲ ಮಾನ್ಯ ಜೀವಿಯಾಗೋದಿಲ್ಲ
ಎಲ್ಲ ಗುಡ್ಡದ ಬೆಳೆದ ಹುಲ್ಲೆಲ್ಲ ಸಂಜೀವಿನಿ ಕಡ್ಡೆಲ್ಲ
ಜಾದೂ ಮಾಡುವ ಸಾಧುಗಳೆಲ್ಲ ಪವಾಡಪುರುಷ ಯೋಗಿಗಳಲ್ಲ ||

ಚಡ್ಡಿ ಹಾಕಿ ಸಡ್ಡು ಹೊಡಿಯೋರೆಲ್ಲ ಕುಸ್ತಿ ಗೆಲ್ಲುವವರೇನಲ್ಲ
ಎಷ್ಟೊ ವರುಷ ಬದುಕಿದರೇನು ಹದ್ದು ಹಿರಿಯನಾಗೇ ಇಲ್ಲ
ಥಳ ಥಳ ಹೊಳೆದ ಮಾತ್ರಕೆ ಕಂಚು ಭಂಗಾರವಾಗೋದಿಲ್ಲ
ರಾತ್ರಿಯಲ್ಲಿ ಬಲು ಮಿನುಗುವ ಮಿಂಚು ಹುಳಗಳು ನಕ್ಷತ್ರಲ್ಲ
ಉಂಡು ಮಲಗುವ ಕುಂಭಕರ್ಣರೆಲ್ಲ ವಿರಕ್ತ ಜಂಗಮರೇನಲ್ಲ ||

ಹೈಬ್ರೀಡ ಜೋಳ ಬೆಳ್ಳಗಿದ್ದರೇನು ಅದೆಲ್ಲ ಬಿಳಿಜೋಳಲ್ಲ
ಸೂರ್ಯಕಾಂತಿ ಹತ್ತಿಕಾಳೆಣ್ಣೆ ಕುಸುಬಿಯಣ್ಣೆಯಂಗಲ್ಲ
ಕಣ್ಣಿಗೆ ದಪ್ಪಗೆ ಕಾಣೋರೆಲ್ಲರೂ ಶಕ್ತಿವಂತರೇನಲ್ಲ
ಇಂಜೆಕ್ಷನ್ನಿನ ಆಕಳುಗಳು ನಮ್ಮಾಕಳಂಗ ಲಕ್ಷಣವಲ್ಲ
ಸಿಂಹಾಸನ ಪಲ್ಲಕ್ಕಿ ಏರಿ ಮೆರೆಯುವವರೆಲ್ಲ ಜಗದ್ಗುರುಗಳಲ್ಲ ||

ಬರಿದು ಬರಿದು ಹಾಳಿ ಕರಿದು ಮಾಡೋರೆಲ್ಲ
ಸಾಹಿತಿಯಾಗೋದಿಲ್ಲ
ನೆಲ ಕೆದರುವ ಇಲಿ ಹೆಗ್ಗಣಾದಿಗಳು ಭೂ ಸಂಶೋಧಕರಲ್ಲ
ಏನೇನೊ ಹಾಡಿ ಹೊಟ್ಟೆ ತುಂಬಿಕೊಳ್ಳೋರೆಲ್ಲ ಗಾಯಕರಲ್ಲ
ಸೀರೆಯುಟ್ಟು ಬಳೆ ತೊಟ್ಟು ಕುಂಕುಮವಿಟ್ಟ ಜೋಗಪ್ಪಸ್ತ್ರೀಯಲ್ಲ
ಬಹಳ ರುದ್ರಾಕ್ಷಿ ರಬ್ಬ ಕ್ಯಾವಿ ಹಾಕಿದವರೆಲ್ಲ ಸ್ವಾಮಿಗಳಲ್ಲ ||

ರವಿಯೆಂಬುವ ಹೆಸರುಳ್ಳವ ಬಂದರೆ ಜಗ್ಗನೆ ಬೆಳಕು ಬೀರೋಲ್ಲ
ರಾಜನೆಂದು ಹೆಸರಿಟ್ಟುಕೊಂಡ ಮಾತ್ರಕೆ ರಾಜ ಕುಲವಂಶಿ–
ಯಾಗೋಲ್ಲ

ಗುರು ಜಂಗಮ ಪೀಠಾಧೀಶರು ನಾವೆಂದು ಹೇಳಿಕೊಳ್ಳುವವರೆಲ್ಲ
ಅನಾದಿ ಜಗದ್ಗುರು ಪೀಠದ ವಾರಸುದಾರರೆಂದೂ ಅವರಾಗೋಲ್ಲ
ಎಲ್ಲರು ದಾರುಕ ಖಾಸಾ ಪೀಠ ಕಲಿಪುರಮಠದ ಖಾಸಯ್ಯರಲ್ಲ ॥



## ಸಿದ್ಧರಾಮನ ಪುರಕೆ

ರಾಗ:=ಕಲ್ಯಾಣ — ತಾಲ:=ಝಪ್ತಾಲ

ಸಿದ್ಧರಾಮೇಶ್ವರನ ಪುರಕೆ ನೀ ಬಾರೊಮ್ಮೆ
ಸಿದ್ಧರಾಮೇಶ್ವರನ ಪಾದಕೆ ನೀ ಬಾಗೊಮ್ಮೆ
ಸಿದ್ಧರಾಮನ ಶುದ್ಧಮನದಿಂದ ಭಜಿಸೊಮ್ಮೆ
ಸಿದ್ಧಿಸಲಿ ಸುಖ ಶಾಂತಿ ಸಂಕ್ರಾಂತಿ ಬೇಡೊಮ್ಮೆ ॥

ಶ್ರೀರೇವಣಸಿದ್ಧ ಗುರುಕೃಪೆಯ ಕಿರಣ
ಮುದ್ದುಗೌಡ ಸುಗ್ಗಲೆಯರ ಆನಂದ ನಂದನ
ಸೊಲಾಪುರದ ಆರಾಧ್ಯ ಗುರುಸಾರ್ವಭೌಮ
ಶ್ರೀಶೈಲ ಮಲ್ಲಯ್ಯನ ಶಿಷ್ಯ ಸೋಮ ಭೀಮ ॥

ಕೆರೆಕಟ್ಟಿ ಕಾಯಕಕೆ ಬೆಲೆಕೊಟ್ಟು ದುಡಿದುಡಿದು
ಗುಡಿ ಕಟ್ಟಿ ಭಾಕ್ತಿಕ್ಯಕೆ ಹೆಸರಾಗಿ ತಾ ಮೆರೆದ
ಶಿವ ತತ್ವ ಸುಧೆ ಸುರಿಸಿ ಧರ್ಮ ಕೆರೆಯ ತುಂಬಿಸಿದ
ಶಿವಸತ್ಯ ಶ್ರೀಗುಡಿಗೆ ಕೀರ್ತಿ ಕಲಶ ತಾನಾದ ॥

ಗುರುಮಲ್ಲಿಕಾರ್ಜುನನ ತನ್ನೂರಿಗೆ ಕರೆತಂದ
ಅರವತ್ತೆಂಟು ಲಿಂಗಗಳ ಸ್ಥಾಪಿಸಿದ ಪೂಜಿಸಿದ
ಧರ್ಮ ಸಂಕ್ರಾಂತಿ ಗೈದ ಶಿವಯೋಗ ಸಿದ್ಧನು
ಲಿಂಗವಾದ ಮಕರ ಸಂಕ್ರಮಣ ಜಾತ್ರೆ ನೀ ಮಾಡು ॥

…………

# ಪರಮಾತ್ಮನ ಲೀಲೆ

ರಾಗ:-ತಿಲಕಾಮೋದ ತಾಲ:-ದೀಪಚಂದಿ

ಪರಮಾತ್ಮನ ಲೀಲೆ ಕಾಣೊ ।
ಹರ ಹರ ಹರ ಶಿವ ಹರನ ಲೀಲೆ ಕಾಣೊ ॥
ಜಗಚ್ಛರಿತ ಜಂಗಮ ಶಿವ ಲಿಂಗವಾದ ಲೀಲೆ
ಅಂಗಜರಿಗೆ ಗುರುಲಿಂಗ । ಲಿಂಗಿಗಳಿಗೆ ಚರಲಿಂಗವಾದ ಶಿವಲೀಲೆ ॥

ಜಂಭೂದ್ವೀಪದಿ ಭರತ ಖಂಡದಲಿ
ಸಾಂಬ । ರಜತ ಗಿರಿಯ ಶೃಂಗ ಶ್ರೇಣಿಯಲಿ
ಗಂಗಾ । ಧರನು ನೆಲೆಸಿ ನಿಂತ ಲೀಲೆಯಲಿ
ಗಂಗೆಯನು ಹರಿಸಿ । ವಿಶಾಲಾಂಗಿಯಾಗಿ
ಕಾಶಿ ವಿಶ್ವನಾಥ ಲಿಂಗಾದ ಽ
ಶ್ರೀ ಕಾಶಿಲಿಂಗ ಽ ಎಂದು ಜಗದಿ ಹೆಸರು ಪಡೆದಿರುವ ॥

ಜಾತಿ ಜಾತಿಯ ಜಗಳ ಸುಳ್ಳಿಂದ
ಕಲ್ಲೆ । ಕನಕವಾದ ಪರಿಯ ತಿಳಿಯೆಂದ
ಶಿವನು । ಕಲ್ಲು ಕನಕ ಬೇರೆಯಲ್ಲೆಂದ
ಕಲ್ಲಲ್ಲಿ ಬಂದ । ಕಲ್ಲೇಶ ಲಿಂಗ
ಕಲಿಕಲ್ಲೇಶ ಮಹಾಕಾಲೇಶನು
ಶ್ರೀ ಉಜ್ಜೈನಿ ಲಿಂಗ ಽ ವೀರಶೈವ ಸದ್ಧರ್ಮ ಬೆಳಗುವನು ॥

ಭ್ರಮರಾಸುರನ ಕೊಂದ ಭ್ರಮರಾಂಬಾ
ಅವಳ । ಕೂಡ ಬಂದು ನಿಂದ ಶಿವಸಾಂಬ
ಅಲ್ಲಿ । ಮಲ್ಲಿಕಾರ್ಜುನ ನಾಮ ಪಡಕೊಂಡ
ಮಲ್ಲಾಂಬೆಗೊಲಿದು । ಎಲ್ಲರನು ಪೊರೆದು
ಪಂಡಿತಾರ್ಯ ಶ್ರೀ ಗುರುವೆ ತಾನಾದ
ಶ್ರೀ ಗಿರಿಯ ಲಿಂಗ ಽ ಕದಳಿ ಬನ ಗುರು ಕುಲದ ಮಹಾಲಿಂಗ ॥

ಶ್ರೀ ಸೌರಾಷ್ಟ್ರದಿ ಸೋಮನಾಥನು
ಪರಳಿ । ಕ್ಷೇತ್ರದಲ್ಲಿ ವೈದ್ಯನಾಥನು
ಹಂಪಿ । ವಿರೂಪಾಕ್ಷ ಲಿಂಗವಾಗಿಹನು
ಜಗದೆಲ್ಲ ತುಂಬ । ನೆಲೆಸಿಹನು ಸಾಂಬ
ಶೈವ ಸತ್ವಕೆ ಸ್ಥಾವರಾಗಿಹನು
ಶ್ರೀ ಶಂಕರಲಿಂಗ ಽ ಎಲ್ಲಿ ನೋಡಿದಡಲ್ಲಿ ನೆಲೆಸಿಹನು ॥

ಅಣುರೇಣು ತೃಣಕಾಷ್ಟದಲಿ
ಭರಿತ । ಕಲ್ಲು ಮುಳ್ಳು ಗಗನ ಭೂಮಿಯಲಿ
ಸಾಂಬ । ಎಂದು ನಂಬಿಗ ಜನಕೆ ನೆನೆಸಿದಲ್ಲಿ
ಉದ್ಭವಿಸಿ ಬಂದ । ಸದ್ಭಕ್ತಿ ಕೊಂಡ
ಬಸವಗೊಲಿದು ಪ್ರಭುಲಿಂಗಾದ
ಶ್ರೀಜಂಗಮಲಿಂಗಽ ಸ್ಥಿರವ ತೊರೆದು ಚರಽಲಿಂಗಾದ ॥ ೦

## ಪ್ರಭು ಬಂದ

ರಾಗಃ=ಕಲಾವತಿ

ತಾಲಃ-ಖವಾಲಿ

ಪ್ರಭುಬಂದ ಮನೆಗೆ ಪ್ರಭುಬಂದ
ಪ್ರಭುಬಂದ ಅಲ್ಲಮ ಪ್ರಭುಬಂದ ॥

ಬಸವನ ಭಕ್ತಿಗೆ ಒಲಿದು ತಾ ಬಂದ
ಅಸಮ ಗಣಂಗಳ ನೋಡುತ ಬಂದ
ಎಸೆವ ಕಲ್ಯಾಣದ ಪುರಕಾನಂದ
ತಂದ ಅಲ್ಲಮ ಯೋಗಿ ಶಿವ ಬಂದ ॥

ಜಂಗಮದಿರವ ತಿಳಿಸುತ ಬಂದ
ಜಂಗಮ ತತ್ವವ ಬೆಳೆಗಲು ಬಂದ
ಲಿಂಗ ಧರ್ಮವ ಬೆಳೆಸಲ್ಕೆ ಬಂದ
ಶರಣ ತಿಂಥಿಣಿಗೆ ಆನಂದವ ತಂದ ॥

ಶೂನ್ಯ ಸಂಪದದ ಪ್ರಾ ಶ್ರೀಮಂತ ಬಂದ
ಪೂರ್ಣತ್ವದ ಪ್ರಭು ಧೀಮಂತ ಬಂದ
ಶರಣರ ಕಂಡು ನಮೋ ನಮೋ ಎಂದ
ವರ ಕಲಿಪುರಗುರು ಚರರೊಡಗೊಂಡ ॥



## ಇಂಡಿಯು ಲಿಂಗ

ರಾಗ:- ಖಂಬಾಶ್ರೀ ತಾಲ:- ಖವಾಲಿ

ಇಂಡಿಯು ಶಿವಲಿಂಗ । ಲಿಂಗ
ಗುರು ಶಾಂತೇಶ್ವರ ಲಿಂಗ । ಲಿಂಗ
ಇಂದುಧರ ಶರಣಾಂತರಂಗ
ಶಿವಶಾಂತ ಲಿಂಗ ಶ್ರೀಗಣಪುಂಗ ॥

ಘನ ಘೋರ ತಪಗೈದ ಇಂಡಿ ಗುಡ್ಡದ ಲಿಂಗ
ಗೋಕ್ಷೀರಿನಭಿಷೇಕ ಕೊಂಡ ಹುತ್ತದಲಿಂಗ
ಓಂಕಾರ ಸ್ವರಗೈದ ಗವಿಯು ಜಾಗ್ರತಲಿಂಗ
ನಿಷ್ಠೆಯಿಂ ಕೇಳಿದರೆ ಮಾತನಾಡುವ ಲಿಂಗ ।
ಮಾತನಾಡುವ ಲಿಂಗ ॥

ಕಲಿಪುರದ ಗುರುಕುಲ ಭೂಷಿತ ಲಿಂಗ
ಶರಣ ತತ್ವವ ನಿತ್ಯ ಪಾಲಿಪ ಚರಲಿಂಗ
ಲಿಂಗ ಧ್ಯಾನದೆ ಗವಿಯೊಳಗೆ ಮಂಡಿತ ಲಿಂಗ
ಗವಿಯುಕಟ್ಟೆಯು ಮೇಲೆ ಗುಡಿಯು ಕಟ್ಟಿಸಿಕೊಂಡ ।
ಮಹಾಲಿಂಗ ॥

ಶ್ರೀಲಿಂಗ ಶಿರಕೆ ಅಕ್ಕಿಯು ರಾಶಿ ಅಭಿಷೇಕ
ಅಕ್ಕಿಯು ನಿಟ್ಟೇರಿ ನಿಲ್ಲುವ ಲೀಲಾ ರಂಗ
ಅಕ್ಕಿ ಪೂಜೆಯು ಕುರುಹು ತೋರಿ ಮೆರೆಯುವ ಲಿಂಗ
ಭಕ್ತಿವಂತರಿಗೊಲಿದು ಲೀಲೆ ಮಾಡುವಲಿಂಗ ।
ಶಾಂತೇಶಲಿಂಗ ॥

ಶಾಂತೇಶನೊಲಿದ ಶ್ರೀದಂಡಿ ಹೂವಿನ ಇಂಡಿ
ಶಾಂತಲಿಂಗದ ಶಿರಕೆ ಅಕ್ಕಿನಿಟ್ಟನ ಇಂಡಿ
ಎಂದು ಹೆಸರಾದಿಂಡಿ ಪುರವೆ ಮಂಗಲದಂಗ
ಲಿಂಗಾಂಗಿ ನೆಲೆಸಿಹನು ಶ್ರೀಶಾಂತೇಶ್ವರ ಲಿಂಗ । ಜಾಗ್ರುತಲಿಂಗ॥

................

## ರಂಗ ಸ್ತುತಿ

ರಾಗ:=ಭೀಮಪ್ಲಾಸ ತಾಲ:- ದಾದರಾ

ರಂಗಭೂಮಿ ರಾಜೇಶ್ವರಿ । ಗಾನಜ್ಞಾನ ದಾನೇಶ್ವರಿ
ಮಂಗಲಾಂಗ ಪೂರ್ಣೇಶ್ವರಿ । ಮಾನ್ಯಶ್ರೀಮಂಡಲಾಧೀಶ್ವರಿ
ಕೃಪೆಯ ನೀಡು ಈಶ್ವರಿ । ಕಾಪಾಡು ಪರಮೇಶ್ವರಿ ॥

ಆದಿಶಕ್ತಿ ರೇಣುಕಾಂಬೆ ಶಾರದಾಂಬೆ ನಾಟ್ಯಾಂಬೆ
ಮೋದದಿಂದ ಕರುಣಿಸಿ ಹರಸು ತಾಯೆ ಜಗದಂಬೆ
ಆದಿಮಾತೆ ಎಲ್ಲಾಂಬೆ ಮೂಕಾಂಬೆ ಭಗಳಾಂಬೆ ॥

ಸಿದ್ಧಲಿಂಗ ಚರಮೂರ್ತಿ ಎಡೆಯೂರಿನ ಗುರುಮೂರ್ತಿ
ಸಿದ್ಧಿ ನೀಡು ಸೇವೆಕೊಂಡು ರಂಗ ಕಲಾ ಸತ್ಕೀರ್ತಿ
ಸಿದ್ಧಿಗೊಳಿಸಿ ಬೆಳಗಿಸಯ್ಯ ನಾಟ್ಯ ನಿರಂಜನ ಮೂರ್ತಿ ॥

ಗಾನಭಾನು ಪಂಚಾಕ್ಷರಿ ಲಲಿತ ಕಲೋದ್ಧಾರಿ
ನಿನ್ನ ವರದ ಸಿರಿಯು ಕರುಳುಗಳ ಕಲಾಸೇವೆಯಲಿ
ನೀನೆ ಹಾಸು ಹೊಕ್ಕಾಗು ರಂಗಭೂಮಿ ಬೆಳಗಲಿ ॥ ೦

## ಮಹಾ ಮಹಿಮ

ರಾಗ:-ಭೈರವಿ ತಾಲ:-ದಾದರಾ

ಮಹಾಮಹಿಮ ಶರಣಬಸವೇಶ
ನೀನಿದ್ದ ಕಲಬುರಗಿ ಶಿವನ ಕೈಲಾಸ
ಕೃಪೆಮಾಡು ಶರಣ ಧರ್ಮ ಸುಪ್ರಕಾಶ ಈಶ ॥

ಅರಳಿಗುಂಡಿಗೆಯ ಹರಳು ಮಲ್ಲಿಗೆ ನೀನಾಗಿ
ಅರಳಿ ಬಂದು ವೀರಶೈವ ಧರ್ಮ ಗಂಧ ಬೀರಿ
ಸರ್ವ ಧರ್ಮದವರಿಂದ ಶಿವನ ಸೇವೆ ಗೈಸಿ
ಮರುಳಸಿದ್ಧ ಗುರುವಿನಡಿಗೆ ಹೂವಾಗಿ ಮುಡಿದೆ ||

ಬೇಡಿದ್ದನ್ನು ಈವೆನೆಂಬುದಾ ಬಸವನ ಭಾಷೆ
ಬೇಡದಲೆ ಈವೆನೆಂಬುದಿದು ನಿನ್ನ ಭಾಷೆ
ಬೇಡಿಸಿಕೊಡುವದು ಭಕ್ತಿ ಸ್ಥಲಕೆ ಹೊರತೆಂದೆ
ಎಲ್ಲರೊಂದೆಂದು ಸಕಲ ಪಡಿ ಪದಾರ್ಥವಿತ್ತೆ ||

ಅಪ್ಪ ದೊಡ್ಡಪ್ಪರಿಗೆ ನೀನಿತ್ತ ವರಫಲವು
ಅನ್ನದಾನ ವಿದ್ಯಾದಾನ ನಡೆದಿದೆ ಅವಿರತವು
ಧರ್ಮತತ್ವ ಶಿಕ್ಷಣದ ಕೃಷಿ ಕರ್ಮದಾಗರವು
ಆಗಿದೆ ಕಲಬುರಗಿ ಪುರವು ನಿನ್ನ ಕೃಪಾ ಹರವು ||

ನೆನೆದ ಜನರ ಕನಸಿನಲಿ ನೀ ಕಾಣಿಸಿಕೊಳುವೆ
ಬಯಿದಿಚ್ಛೆಗಳ ನೀ ಪೂರೈಸಿ ಕೊಡುವೆ
ಮರ್ತ್ಯ ಮಾಮನೆಯ ಬೆಳಗಬಂದ ನಂದಾದೀಪವೆ
ಕಾಮಿಸಿದ ಭಕ್ತರಿಗೆ ನೀ ಕಾಮಧೇನುವೆ ||

ಕಾಲಕಾಲದಲ್ಲಿ ನಿನ್ನ ದಯಪಿರಲಿ ಶರಣ
ನಂಬಿದ ಽ ಭಕ್ತರಿಗೆ ನಿನ್ನ ಅಭಯ ಕರುಣ
ಇರಿಸಯ್ಯ ಹೃದಯದಲಿ ನಿನ್ನ ನಾಮ ಸ್ಮರಣ
ಹರಸಯ್ಯ ಕಲಿಪುರದ ಗುರುಕರುಣಾ ಕಿರಣ ||

○

## ನಾಲತ್ವಾಡದ ಶರಣ

ರಾಗಃ-ಮಿಶ್ರಪೀಲೂ — ತಾಲ:-ಖವಾಲಿ

ನಾಲತವಾಡದ ಶರಣ ವೀರೇಶನ
ಚರಿತೆಯ ನಾ ಹೇಳುವೆ । ಶುಭ
ಗೀತೆಯ ನಾ ಪಾಡುವೆ ಽ ಽ ಽ ಽ ||

ನಲವತ್ತವಾಡವ । ತೋರಿದ ಬಸವ
ನಲತ್ವಾಡದಲ್ಲಿ । ಆ ಸಾಕ್ಷಿಯಲ್ಲಿ
ವೀರೇಶ ಶರಣ ಹುಟ್ಟಿದನಿಲ್ಲಿ । ಗಣಮಠದಲ್ಲಿ ॥

ಧರ್ಮದ ಪ್ರಾಣ ದಯೆಯೆಂದು ತಿಳಿದ । ಶಮೆದಮೆ ಶಾಂತಿ ಸಂಗಮವೆ ತಾನಾದ
ಕಾರುಣ್ಯ ಗುಣದ ತವರಾಗಿ ನಿಂದ । ಬಲಿಕೊಡುವವರ ಕಂಡು ಬಲುನೊಂದ
ಸತಿ ಗುರುದೇವಿಯು ಸುತೆ ರುದ್ರಾಂಬೆಯು । ಕರಕೊಂಡು ಹೊಂಟ ಗಣಾಚಾರಬಂಟ
ಹಿಂಸೆಯಾಗುವ ಪುರದಾಟ ನಿಂತ। ಸೋಲಾಪುರಕೆ ಹೋದ ನಾಲತ್ವಾಡ ಸಂತ ಶಿವಸಂತ ಮಹಾಂತ ॥

ಭಿಕ್ಷಾ ಕಾಯಕದಿ ಶಿವನಂತೆ ಮೆರೆದ । ಕಲ್ಯಾಣ ಶರಣರ ಬಾಳನ್ನೆ ಬಾಳಿದ
ಬೇಡಿದ ಫಲಗಳ ಜನಕೆ ಕರುಣಿಸಿದ । ಪರಹಿತಕೆ ತನು ಸವೆಸಿ ಕರಗಿದ
ಹಾನ್ಗಲ್ಲ ಸ್ವಾಮಿಯು ಪಾದ ತೀರ್ಥ ಪಡೆದ। ಅವರಡಿಗೆ ರುದ್ರಮ್ಮನೊಪ್ಪಿಸಿದ
ಶಿವಯೋಗ ಮಂದಿರದ ಶಿವಯೋಗಿ ನಿನ್ನ । ಕೃಪೆಯಿರಲಿ ಎನ್ನುತ ಶಿವನಲ್ಲಿ ಬೆರೆದ ಲಿಂಗೈಕ್ಯನಾದ ॥

ನಿಂದಿಸಿದವರ ನಂಜು ತಾನುಂಡ । ವಂದಿಸಿದವರ ಉಣಿಸಿ ತಾನುಂಡ
ನಾಲತವಾಡಕೆ ಹೆಸರನ್ನೆ ತಂದ । ಸೊಲಾಪುರಕೆ ತಾನೆ ಅರ್ಪಣಗೊಂಡ
ಸಿದ್ಧರಾಮನ ಮುಂದೆ ನಿಜನಂದಿಯಾದ । ಸಿದ್ಧಿಗೊಡುವ ಮಹಾಸಿದ್ಧ ಶರಣ
ಶರಣ ತತ್ವದಾಕಾಶ ಬೆಳಗುವ ಚಂದ್ರ । ನಾಲತವಾಡದ ಶರಣ ವೀರೇಂದ್ರ ಶಿವ ಶರಣೇಂದ್ರ. ॥

............

## ಮಹಾಂತನ ನೆನೆ

ರಾಗ:–ಅಹೇರ ಭೈರವ — ತಾಲ:- ಕೆಹರವ

ಮಹಾತನ ನೆನೆ ಮನವೆ । ವಿಜಯ
ಮಹಾಂತತ್ವದ ಘನವಂತಾಗೆಲೆ ಮನ
ಸಂತತ ಸಲ್ಲಿಸು ನಮನ । ವಿಜಯ
ಮಹಾಂತಗರ್ಪಿಸು ಶತ ನಮನ ॥

ಮರ್ತ್ಯವೆಂಬುದು ಮತ್ತೊಂದೆನಬೇಡ
ನಿನ್ನ ಶರೀರಿದು ಮರ್ತ್ಯದ ಜಾಡ
ಚಿತ್ತರಗಿ ಎಂಬುದು ಬೇರಿಲ್ಲ ತಿಳಿ ನಿನ್ನ
ಚಿತ್ತವೆ ಅರಳಿ ಅರಗಿ ಚಿತ್ತರಗಿಯಾಗಲಿ
ಮಾಂತ ನಾಮದ ಮಡಿನೀರು ಹರಿವ
ಮಲಾಪಹಾರಿ ನಿನ್ನ ನುಡಿಯಾಗಲಿ
ಅಂತಾಗಲು ಮಾಂತ ನಾಮವ ನುಡಿ ನುಡಿ
ಅನುಗಾಲ ಮಹಾಂತನ ನೆನಿನೆನಿ ನೆನಿನೆನಿ ॥

ಮಡಿ ನುಡಿಯಾಡಿ ನಡೆಮಡಿಮಾಡಿ
ಮಹಾಂತ ಸ್ಮರಣೆಯು ನೀರ ಸಾಗರದಿ
ನಿನ್ನ ಚಿತ್ತ ನೆನೆನೆನೆದು ಕರಗಿದಾಗ
ಕರಗಿ ಕರಗಿ ಕರಗಿ ಚಿತ್ತರಗಿದ್ದಾಗ
ಅದು ನಿಜದೆ ಚಿತ್ತರಗಿ ಪೀಠವೆಂತಾನ
ಆ ಪೀಠ ನನ್ನದೆಂದು ಬಂದು ಮೆರಿತಾನ
ಅದಕಾಗಿ ನೆನೆ ನೆನೆ ಮಹಾಂತನ । ದಿನದಿನ ನೆನೆನೆನೆ ॥

ಈ ಊರ ಬಿಟಗೊಂಡು । ಇದರಾಸೆ ಹರಕೊಂಡು
ಹೊರಬಂದರೆ ಹಳ್ಳ ಎದುರಿಗೆ ನಿನ್ನೆದುರಿಗೆ
ಮಾಯಾ ಮೋಹಗಳೆಂಬ ದೊಡ್ಡಹಳ್ಳ ಸಣ್ಣಹಳ್ಳ
ದಾಟಿದರೆ ಅಲ್ಲಿದೆ ಶ್ರೀ ಮಹಾಂತ ನಿವಾಸ
ಅದು ಮಹಾಂತ ಶಿವನ ಭೂ ಕೈಲಾಸ
ಕಂಡದಕೆ ಬಾಗೊ ದಿನದಿನ । ಮನದಣಿಹಾಡು ಮಾಂತನ ॥

ಮಹಾಂತನೊಲಿದು ನಿತ್ಯ ವಾಸಿಸುವ ನಿಜಭಾವಣೆ ನೀನಾಗು ಮನವೆ
ಮಹಾಂತ ಬಂದು ಆನಂದದಿ ಕೂಡುವ ಕರಡಕಲ್ಲು ನೀನಾಗೆಲೆ
ಮಹಾಂತ ತತ್ವದ ಜಲಹೊನ್ನಗುಂದ ಚಿರಹೊಂಡ ಹುನಗುಂದ ನೀನಾಗು
ಮಹಾಂತ ಶಿವರಲಿ ಭೇದವಡಗಿಪ ಬೇದ್ವಾಡ್ಗಿ ಬಾದ್ವಾಡ್ಗಿ ನೀನಾಗು

ಮಹಾಂತ ಪೀಠದೈವತತ್ತ್ವರು ಪುರತತ್ವ ಸಂಗಮ ಲಿಂಗ ನೀನಾಗು
ಒಳಗು ಹೊರಗು ಮಹಾಂತತ್ವ ತುಂಬಿ ನೀ ಸ್ವಯಂಭುಲಿಂಗವೆನೀನಾಗು
ಅಂತಾಗಲು ನೆನೆ ಮಹಾಂತನ । ದಿನದಿನೆ ನೆನೆ ವಿಜಯಮಹಾಂತನ ॥

............

## ಅಥಣಿಯ ಶಿವನು

ರಾಗ:-ಭೀಮಪ್ಲಾಸ

ತಾಲ:-ಖವಾಲಿ

ಅಥಣಿಯ ಶಿವನು । ಚರಕುಲ ಭಾನು
ಮುರುಘಾಮಠದೊಳು ನಿರುತ ಜಾಗ್ರತನು
ಶಿವಯೋಗಿ ಮುರುಗೇಂದ್ರ ।ಶ್ರೀ। ಚರರಾಜಯೋಗೀಂದ್ರ॥

ಬಸವ ಬಸವಾ ಎನ್ನುತ ತಾನೆ । ಅಸಮ ಲೀಲೆಯ ತೋರಿದ ತಂದೆ
ವಸುಧೆಯೊಳಥಣಿ ಕ್ಷೇತ್ರದೊಳಗೆ । ಎಸೆಯುವ ಜಾಗ್ರುತ ಗಣ ಪ್ರಭುವೆ
ಮುರುಗೇಂದ್ರ ಯತಿವರನು । ಶ್ರೀ । ಮುರುಗೇಂದ್ರ ಪ್ರಭುವರನು ॥

ಸೇವಿಪ ಜನರ ಮೊರೆಯ ಕೇಳಿ । ಧಾವಿಸಿ ದಯಮಾಡಿದ ಯೋಗಿ
ಭಾವಿಸಿದಂತೆ ಬಾಳಲಿ ತುಂಬಿ । ಪಾವನಗೊಳಿಸಿದ ಜನಾನುರಾಗಿ
ಮುರುಗೇಂದ್ರ ಶಿವಯೋಗಿ । ಶ್ರೀ । ಮುರುಗೇಂದ್ರ ಶಿವಯೋಗಿ ॥

ಬಂಜೆ ತಾಯ್ಗಳ ಮೊರೆಯ ಕೇಳಿ । ಸಂತಾನ ಹರಸಿದ ಗುರುದೇವ
ನಂಜುಗೊರಲ ಶಿವ ತಾನಾಗಿರುವ । ಸಂತತ ಪೊರೆಯುವ ಚರದೇವ
ಮುರುಗೇಂದ್ರ ಬಸವ ಶಿವ । ಶ್ರೀ । ಮುರುಗೇಂದ್ರ ಶಿವಬಸವ ॥

ಬಾಗಿದ ಜನರ ಬೇನೆಯನಳಿದ । ಭಜಿಸಿದ ಭಕ್ತರ ಬಡತನ ಕಳೆದ
ಪ್ರಾರ್ಥಿಸಿದವರ್ಗೆ ಬೇಡಿದ್ದು ಕೊಡುವ । ಪೂಜಿಸುವವರಿಗೆ ತಾ ಕಲ್ಪತರುವ
ಶ್ರೀ ಅಥಣಿ ಪ್ರಭುದೇವ । ಶ್ರೀ । ಮುರುಗೇಂದ್ರ ಗುರುದೇವ ॥

ವೀರ ವಿರತ ಮೃತ್ಯುಂಜಯಗೊಲಿದ । ಧಾರವಾಡದ ಮಠವ ಬೆಳಗಿಸಿದ
ಮಹಾಂತ ಮೃತ್ಯುಂಜಯ ಅಪ್ಪಗಳಲ್ಲಿ । ಲೀಲೆಯ ತೋರುತ ಮೆರೆವನು ಸತತ
ಮುರುಗೇಂದ್ರ ಚರತಾತ । ಶ್ರೀ । ಮುರುಗಾರ್ಯ ಶಿವತಾತ ॥

# ಲೀಲೆ ಕೊಂಡಾಡು

ರಾಗ:–ತಿಲಕಮಿಶ್ರ ತಾಲ:–ಕೆಹರವಾ

ಲೀಲೆ ಕೊಂಡಾಡು । ಮಹಾ ಲೀಲೆ ಕೊಂಡಾಡು
ಕಲಕೇರಿಯ ಗುರುದೇವರ ಲೀಲೆ ದಿನ ದಿನ ನೀ ಹಾಡು
ಆಲಿಸಿ ಕೇಳು ಕಲಿಪುರದೀಶರ ಭಜನೆಯ ನೀ ಮಾಡು ॥
ಶ್ರೀ ಕಲಿದೇವನ ಕೇರಿ ಕಲಿಕೇರಿ ಗುರು ಕಲ್ಲಯ್ಯನ ಹಂತ್ಯಾಕ
ಬಂದು ಮಾಚಯ್ಯ ಗುರು ಸೇವೆಯಲಿ ಮಡಿವಾಳನಾದ ವಿದ್ಯ
ಕಲಿಯುದಕ
ಬಸವ ಕರೆಯಂತೆ ಗುರುಶಿಷ್ಯರು ಹೊರಟಾರ ನೋಡು ಕಲ್ಯಾಣಕ
ಹರಿ ವಿರಿಂಚಿಪುರ ಮಾನ್ಯ ನೀಡ್ಯಾರ ಕಲ್ಲಿದೇವರ ಪಾದಕ
ಕಲ್ಲಯ್ಯ ಬರುವಿಗೆ ಈಗ ಕಲಬುರಗಿ ಆಗಿದೆ ಆ ಪುರ ನೊಡುವಕ
ಐದು ಮಠಗಳ ಉಂಬಳಿಯಿತ್ತಾರ ಗುರುಶಿಷ್ಯರ ಶಿವಪೂಜಾಕ
ತಂದೆ ಗುರುವೆಂದು ಹೆಸರಾಗ್ಯಾರ ಶರಣರ ಅನುಭವ ಮಂಟಪಕ
ಕಲಿಕೇರಿಯೆ ಗುರುಮಹಿಮರ ಚರಿತೆ ಸ್ಮರಿಸೊ ನೀ ಪಾವನಾಗುದಕ ॥
ಕಲಿಪುರದಂತೆ ಕಲ್ಯಾಣದಿ ಗುರು ಶರಣರ ಬಟ್ಟೆಯ ತೊಳೀತಾನ
ಅದನ್ನು ಸೇರದ ದುಷ್ಟರ ಬಟ್ಟೆಯ ಉರಿಗಣ್ಣಿಂದಲಿ ಸುಟ್ಟಾನ
ಗಣರಿಗೆ ನೀಡುವೆನೆಂಬ ಅಹಮ್ಮಿನ ಬಸವೇಶನಿಗೆ ಬೈತಾನ
ನೀರು ಕಾಲಿಲೆ ಚಿಮ್ಮಿ ರತ್ನಗಳ ಮಾಡಿ ಬಸವನ ತಿದ್ಯಾನ
ಅಗಸರಿಗೆಲ್ಲ ಲಿಂಗವನಿತ್ತು ಶಿವಮತದಲಿ ಕರಕೊಂಡಾನ
ಆಗವರೆಲ್ಲ ಮಡಿವಾಳೇಶ ಗುರು ಎಂದು ಬರಿಸ್ಯಾರ ಶಾಸನ
ಮಡಿವಾಳನ ಕುಲದವರೆನ್ನುತ ಕಲಿಕೇರಿಗೆ ಬರತಾರ ದಿನ ದಿನ
ಮಡಿವಾಳೇಶ್ವರ ಗುರುಪೀಠ ಕಲಿಕೇರಿ ಕ್ಷೇತ್ರ ನೋಡು ಪಾವನ ॥
ವೀರಘಂಟೇಶಗೆ ಪಟ್ಟವನಿತ್ತು ಚರಜಂಗಮನಾಗುತ ಚರಿಸಿ
ಪಿಂಪಿಲ ಪುರವನು ಗುರುಕಲಿದೇವರ ಹೆಸರಲಿ ಮಾನ್ಯವ ಸ್ವೀಕರಿಸಿ
ಕಲಿದೇವರ ಹಿಪ್ಪರಗಿ ಹೆಸರಿರಿಸಿ ಮಡಿವಾಳನ ಮಠದಲಿ ನೆಲಿಸಿ
ವೀರಘಂಟೈನೊಡನಿರು ಕಲಿಪುರದೆ ಎಂದು ಮಡಿವಳಗೆ ಬೋಧಿಸಿ

ಲಿಂಗವಾದ ಗುರು ಖಾಸಲಿಂಗ ಕಲ್ಲೇಶನ ತಾಣ ನಿಜ ಕಾಶಿ
ಕಲ್ಲಿನಾಥೆ ಕಲ್ಮೇಶ್ವರನ ಕಲಿದೇವರಿಪ್ಪರಗಿ ಅವಿನಾಶಿ
ಗುರುವಿನಪ್ಪಣೆಯಂತೆ ಮಡಿವಾಳ ದೇವನಾದ ಕಲಿಪುರವಾಸಿ
ಪಾವನಾಗು ಗುರುವೀರಘಂಟೈ ಮಡಿವಾಳೇಶ್ವರ ಪಾದವ ಭಜಿಸಿ ॥

ಕಲ್ಲಿನಾಥೆರ ಕಳೆಯನೆ ಶ್ರೀಗುರು ವೀರಘಂಟೀಶನಲಿ ಕಂಡು
ಕಲಿಕೇರಿಯ ಗುರುಮಠದಿ ನಿಂತಾನ ಮಡಿವಾಳೇಶ್ವರ ಮುದಗೊಂಡು
ಕಲಿಪುರ ದೇಸಾಯಿ ಮೊರೆ ಕೇಳ್ಯಾನ ವೀರಘಂಟೈ ಮಡಿವಾಳರು
ವೈರಿ ರಾಜರ ದಂಡು ಸಂಹರಿಸಿ ದೇಶಗತಿಗೆ ದಿಕ್ಕಾಗುವರು
ಕೊಂಡಗೂಳಿಯಲಿ ಪುರಾಣ ಹೇಳಿ ಧರ್ಮ ಜಾಗ್ರತಿಯ ಮಾಡುವರು
ಕರುವಿನ ಎಳೆಮೊಲೆಯಿಂದ ಹಾಲ್ಕರೆದುಎಳಮೊಲಿ ಪುರವಾಗಿರಿಸುವರು
ಶ್ರೀಗುರು ವೀರಘಂಟೇಶ್ವರ ಶ್ರೀ ಮಡಿವಾಳೇಶ್ವರ ದೇವರು
ಉಭಯರೊಂದಾಗಿ ನಾಡನೆ ಚರಿಸಿ ಸರ್ವ ಭಕ್ತರ ಪೊರೆಯುವರು ॥

ಚೌದ್ರಿ ವೀರಪ್ಪ ಕಾಳಿಲ್ಲವೆಂದು ಕೊರಗುವದನ್ನು ಕಂಡಾರ
ಬರಿಗುಮ್ಮಿಯಲಿ ಜೋಳ ಸುರಿಸುತ ಗುಮ್ಮಿಸೆಟ್ಟಿಯ ಮಾಡ್ಯಾರ
ಕಲಿಖ್ಯಾತಯ್ಯಗೆ ಪ್ರಾಣವನಿತ್ತು ಶರಣಾಧಿಕ್ಯವ ಮೆರಿಸ್ಯಾರ
ಶಿವಣಗಿ ಪುರದ ನೂಲುವ ಚಂದಗೆ ಲಿಂಗ ದೀಕ್ಷೆಯ ಇತ್ತಾರ
ಬಡವ ನಾಯ್ಕೋಡಿ ಮೋಲಾಸಾಹೇಬಗೆ ಅಣಬಿ ಚಿನ್ನ ಮಾಡಿ ನೀಡ್ಯಾರ
ಹೋದ ಲಕ್ಷ್ಮಿಯ ಭಂಡಿಯ ತುಂಬಿ ಮರಳಿ ಬರುವಂಗಮಾಡ್ಯಾರ
ನಮ್ಮ ಸೇವೆಯಲಿ ಭಂಡಿಲಕ್ಷ್ಮಿ ಸ್ಥಿರವಾಗಿ ಇರತಾಳ ಅಂತಾರ
ನಮ್ಮ ತೃಪ್ತಿ ಮುತ್ತೈದೇರ ಸೇವೆಮಾಡಲು ದೇಸಾಯಿಗ್ಹರಿಸ್ಯಾರ ॥

ಹೊಸಲು ಹುಣ್ವಿದಿನ ಕಲಿಪುರ ಮಠದೆ ಸಜೀವ ಸಮಾಧಿಹೊಂದುವರು
ಇವರ ಸಮಾಧಿಯ ಮೇಲೆ ಜೋಡುಗದ್ದಿಗೆಯ ಗುಡಿಯನೆ ಕಟ್ಟುವರು
ವೀರಘಂಟೈ ಮಡಿವಾಳೇಶ್ವರ ಗದ್ದಿಗೆಮಠವಾಗೀಗ ಮೆರೆಯುವದು
ಗುರುಶಿಷ್ಯರ ಜೋಡಿ ತೇರಿನ ಜಾತ್ರೆ ಶತ ಶತಮಾನದಿ ನಡೆಯುವದು
ಉಭಯರು ಸರಿಸಮವಾಗಿ ಬೆರೆದ ಶಿವಸಿದ್ಧಾಂತದ ಸಾಕ್ಷಿಯ ಪೀಠ

ಜೋಡಿ ಗದ್ದಿಗೆಯು ಜೋಡಿ ತೇರಿನ ಜೋಡಿ ಮಹಿಮರಪರಿಪಾಠ
ಪೀಠದ ಶಾಖಾಮಠಗಳಲಿ ಜೋಡಿಸುಖದ ಪೂಜೆ ನಡೆದಿದೆ ನೋಡು
ಕಲಿಪುರ ಪೀಠದ ಗುರು ಸಂಸ್ಥಾನದ ಗುಡಿಗೆ ಬಾಗು ಪಾವನವಾಗು ॥



## ಭಾದ್ರಪದ ಭಾಗ್ಯದೇವತ

ರಾಗ:- ಕಾಪಿ	ತಾಲ:-ಖವಾಲಿ

ಭಾದ್ರಪದದ ಭಾಗ್ಯದೇವತ । ನಮೊ ಸಿದ್ಧಿ ಬುದ್ಧಿ ಪ್ರದಾತ
ಶರಣು ಶರಣು ಶರಣು ಹರಗಣಾಧಿ ನಾಯಕ ॥

ಪಾರ್ವತಿ ತನಯ ಮೂರುತಿ । ಪರಶಿವನಭಯ ಸ್ಪಕೀರ್ತಿ
ಸರ್ವ ಕಾರಣಿಕ ಶಕ್ತಿ । ಸರ್ವ ಶುಭದಾಭಿವ್ಯಕ್ತಿ ॥

ಏಕದಂತ ಅನಂತ ಮಹಾಂತ । ಅನೇಕಪ್ರಭಾ ಪೂರ್ಣ ಪ್ರಶಾಂತ
ಗಣ ಪಂಕ್ತಿಗನಾದಿ ಸಂತ । ಜನ ನುತಿಗೊಂಬ ಭಗವಂತ ॥

ಭಾದ್ರಪದ ಭೂಷಿತ ಪೂತ । ದಾತಾ ಭೋಕ್ತಾ ಶ್ರೀತಾತ
ಹರಿವಿರಿಂಚಿ ಸುರ ವಂದಿತ । ವಿಘ್ನ ನಾಶಕ ಕಾಯೋ ಸತತ ॥



## ಭಗವತಿ

ರಾಗಃ=ಕಲ್ಯಾಣಿ	ತಾಲ:-ತ್ರಿತಾಲ

ಭಗವತಿ ಭೂ ಮಾಲಿಕೆ ಹೇ ಅಂಬಿಕೆ
ಜಗದಾನಿಕೆ ನಾಯಿಕೆ ಲಲಿತಾಂಬಿಕೆ ॥

ರವಿ ಚಂದ್ರ ತಾರೆಗಳಿಗೆ ಆಧಾರೆ
ಭುವಿ ಗಗನ ಗಾಳಿಗಳಿಗೆ ಆಸರೆ
ಜೀವ ಜೀವನ ಜಗಗಳ ಉದ್ಧಾರೆ
ಭವ ಹಾರೆ ಶಿವ ನೀರೆ ಶುಭಸಾರೆ ಪೂರೆ ॥

ಭಜಿಸುವ ಜನ ಮನ ಭವನ ನಿವಾಸಿನಿ
ಯಜಿಸುವ ಮನು ಮುನಿ ಗಣರ ಸುಹಾಸಿನಿ

ಅಜ ಹರಿ ಸುರರಾದಿಗಳಿಗೆ ಅಧಿಕಾರಿಣಿ
ಸುಜನ ಪೋಷಿಣಿ ಸುಗುಣಿ ಸುರಮಣಿ ॥
ಭವ ಭಯ ಹರಣಿ ಅಸುರ ಮರ್ದಿನಿ
ತವ ಜಯ ಧರಣಿ ಸುರರಸ ವರ್ಧಿನಿ
ಭುವಿಜನ ಕಲ್ಯಾಣಿ ಸಿರಿ ಸುಖ ದಾಯಿನಿ
ಶಿವೆ ವಾಣಿ ವೇಣಿ ಮೃಢಾಣಿ ಭವಾನಿ ॥

............

## ಶಬರಿಗಿರಿ ಅಯ್ಯಪ್ಪ

ರಾಗಃ-ಭೈರವಿ ತಾಲಃ - ಖವಾಲಿ

ಶಬರಿ ಗಿರಿಯ ಅಯ್ಯಪ್ಪ ಶ್ರೀ
ಅಭಯವ ಕೊಡುವ ಜಾಗ್ರತನಪ್ಪ
ವರ ಭಕ್ತಿಯಲಿ ಆತನ ಭಜಿಸಿ
ಶರಣೆಂದವರಿಗೊಲಿಯುವನಪ್ಪ ॥

ಹರಿ ಹರ ಪುತ್ರನು ಅವನಪ್ಪ
ನರ ಸುರ ಮನು ಮುನಿ ಪ್ರಿಯನಪ್ಪ
ಶರಣೆಂಬ ಭಕ್ತ ಎಲ್ಲಿದ್ದರೇನಪ್ಪ
ಸರಸದಿ ಅಲ್ಲಿಗೆ ಬರುವನು ಅಯ್ಯಪ್ಪ ॥

ಕೀಳಿವನು ಮೇಲಿವನು ಎನ್ನುವದಿಲ್ಲ
ಎಲ್ಲರೆನ್ನವರೆಂಬುದೆ ಅಯ್ಯಪ್ಪನ ಸೊಲ್ಲ
ಭವಿ ಭಕ್ತನೆಂಬುವ ಎರಡೆ ಎರಡು ಕುಲ
ಎಂದ ಬಸವನಂತೆ ಅಯ್ಯಪ್ಪನಿಹನಲ್ಲ ॥

ಅಯ್ಯನೆಂದರೆ ಗುರು ಅಪ್ಪನೆಂದರೆ ಹಿರಿಯ
ಗುರು ಹಿರಿಯ ಶಿವನವನು ಬಲು ಹಳೆಯ
ಹಳಬನಾದರೂ ಆತನಿನ್ನೂ ಎಳೆಯ
ಯುಗ ಯುಗ ಮರುಳಿದನು ಅಸುರ ಅಯ್ಯಪ್ಪಯ್ಯ ॥

# ದೇವ ಸೂಗೂರೇಶನ ಗುಡಿಗೆ

ರಾಗಃ–ದೇಸ ತಾಲ:–ದಾದರಾ

ದೇವಸೂಗೂರೇಶನ ಗುಡಿಗೆ ಬಾರೊ
ಪೂಜಾರಯ್ಯಗಳು ಮಾಡುವ ಪೂಜೆ ನೋಡೊ
ನೋಡುವ ಭಕ್ತರ ತನು ಪಾವನ
ನೋಡಿದ ಭಕ್ತರ ಮನ ಪಾವನ ॥

ಬೆಳಗುಜಾವ ಸಮಯದಲ್ಲಿ ಪೂಜೆ ನಡಿತಾದ
ಸುಗುರೇಶನ ಸುಪ್ರಭಾತ ರಿಕಾರ್ಡ ಕೇಳತಾದ
ಅಡಿಗಡಿಗೆ ಶಿವನೆಂದು ಭಜನೆ ಮಾಡತಾರ
ಮಡಿಯಿಂದ ಕೃಷ್ಣಾನದಿಯ ನೀರ ತರತಾರ
ಒಡೆಯ ಸುಗುರೇಶನಿಗಭಿಷೇಕ ಮಾಡತಾರ ॥

ಭಕ್ತಿಯಿಂದ ಭಸ್ಮಧರಿಸಿ ಗಂಧ ಹಚ್ಚತಾರ
ಪತ್ರಿ ಪುಷ್ಪಗಳ ರಾಶಿ ನಿಟ್ಟ ಒಟ್ಟತಾರ
ಝರತಾರಿ ರೇಶ್ಮಿ ಮಡಿ ಧೋತ್ರ ಉಡಸತಾರ
ಬೆಳ್ಳಿ ಭಂಗಾರ ಭುಜ ಕಿರೀಟ ಹಾಕತಾರ
ಮುತ್ತು ರತ್ನ ಮಾಲೆಗಳ ಕೊರಳಿಗ್ಹಾಕತಾರ ॥

ಕಣ್ಣಬಟ್ಟು ಕೋರೆ ಮೀಸೆ ಹಣೆಗಣ್ಣನಿಡತಾರ
ಲಿಂಗ, ಲಿಂಗದಕಾಯಿ ರುದ್ರಾಕ್ಷಿ ಹಾಕತಾರ
ಭಂಗಾರದ್ಹಾವುಗೆಯ ಪಾದಕ್ಹಾಕತಾರ
ಚಿನ್ನದ ಉಡದಾರ ನಡಕೆ ಕಟ್ಟತಾರ
ಮಿರಿ ಮಿರಿ ಮಿಂಚುವ ಖಡ್ಗ ಕೈಗೆ ಕೊಡತಾರ ॥

ವೇದ ಮಂತ್ರ ಘೋಷದಲ್ಲಿ ಪೂಜೆ ಮಾಡತಾರ
ಶ್ರೀರುದ್ರಾಭಿಷೇಕ ವಾರ ವಾರ ಮಾಡತಾರ
ಊರ ಹೆಣ್ಣುಮಕ್ಕಳೆಲ್ಲ ಕಳಸ ಬೆಳಗತಾರ
ಸಕಲ ಭಕ್ತರೆಲ್ಲ ಬಂದು ಪ್ರದಕ್ಷಿಣೆ ಹಾಕ್ತಾರ
ದೇವಲೋಕ ಅಲ್ಲಿಲ್ಲ ಇಲ್ಲೆ ಐತಿ ಬಾರ ॥

ಭಸ್ಮ ಗಂಧ ಕುಂಕುಮಾಂಗಧರನಾಗಿ ನಿಂತಾನ
ಮುತ್ತು ರತ್ನಾಭರಣಗಳಿಂ ಝಗ ಝಗಿಸತಾನ
ಧೂಪ ದೀಪಾರತಿಯಲಿ ಥಳ ಥಳ ಹೊಳಿತಾನ
ಭಕ್ತಿಯಿಂದ ಬಾಗಿನೋಡೊ ಕುಲು ಕುಲು ನಗತಾನ
ಶುದ್ಧಮನದಿ ಕರಿಯೋ ಅವನೆದ್ದು ಬಂದು ಹರಸ್ತಾನ ||

ಗಂಟಿ ಝಾಗಟಿ ಸನಾದಿ ಮೇಳ ನಾದ ಕೇಳ್ತಾನ
ಪೂಜೆ ಮಾಡಿಸಲ್ಕೆ ಬಂದ ಭಕ್ತರನ್ನು ನೋಡ್ತಾನ
ನಿತ್ಯ ಮೂರು ಹೊತ್ತು ಪೂಜೆ ಸ್ವೀಕರಿಸಿ ನಲಿತಾನ
ನೆನೆದವರ ಕನಸಿನಲ್ಲಿ ಬಂದು ಮಾತಾಡ್ತಾನ
ಕಷ್ಟದಲ್ಲಿ ಕರೆದರೆ ತಾ ಓಡಿ ಬಂದು ಕಾಯ್ತಾನ || ○

## ಎಂಥಾ ಮುದುಕ

ರಾಗಃ- ತಾಲ:- ದಾದರಾ

ಎಂಥಾ ಮುದುಕ । ಅವನೆಂಥಾ ಮುದುಕ
ಮುಕ್ತಿಮಂದಿರದ ಮುದುಕ । ಬಂದಿದ್ದ ನಮ್ಮ ಉದ್ಧಾರಕ ||

ಯುಗ ಯುಗದಲಿ ಅವತಾರಗೊಂಡಥೆ
ಯುಗದಿಂದ ಯುಗದವರೆಗೆ ಇರುವಂಥೆ
ಅಂದಂದಿಗೆ ಹಳೆಯನಾತ ಅನಾದಿ ರೇಣುಕ
ಇಂದಿಂದಿಗೆ ಎಳೆಯನೀತ ಪ್ರಸನ್ನ ರೇಣುಕ
ಶಿವತಾನೆಂಬ ಸಾಕ್ಷಿ ಸಾರುತ ತೋರುತ
ಮುದುಕಾಗಿದ್ದ ಮುಕ್ತಿಮಂದಿರದ ಮುದುಕ ||

ಮುದುಕನಾದರೂ ಅವನ ಬೆನ್ನು ಬಾಗಿದ್ದಿಲ್ಲ
ಜೋಲಿ ಹೊಡಿಯಲಿಲ್ಲ ಕೋಲು ಹಿಡಿಯಲಿಲ್ಲ
ಹುಡುಗರಂತೆ ಹುರುಪಾಗಿ ಓಡಾಡತಿದ್ದ
ಲೋಡ ಶಿರುವತಿದ್ದ ಜೋಳ ಬೀಸತಿದ್ದ

ನಟ್ಟ ಕಡಿದು ಹೊಲವ ಹರಗಿ ಕಾಳ ಬಿತ್ತುತಿದ್ದ
ದಿಟ್ಟ ರೈತನೆ ಆಗಿ ಜಗ ಜಟ್ಟಿಯಂತಾಗಿ
ನೇಟಾಗಿ ನಿಲ್ಲತಿದ್ದ ಮಾಟಾಗಿ ಮೆರಿತಿದ್ದ
ಕುಂಭ ಹೊತ್ತು ಎಂಟು ತಾಸು ಪೂಜೆ ಮಾಡತಿದ್ದ
ಬಲ ಭೀಮ ಶಕ್ತಿವಂತನಿದ್ದ ಮುದುಕನಾಗಿದ್ದ ॥

ಪ್ರಸನ್ನ ರೇಣುಕನಿಗೆ ಏನೆಂದು ಕರಿಯಲಿ ?
ಹುಡುಗನೆನ್ನಲೆ ? ಹಲ್ಲಿಲ್ಲ ಬಚ್ಚಬಾಯಿ ಮುದುಕ
ಮುದುಕನೆನ್ನಲೆ ? ಹುಲಿಯಂತೆ ಗರ್ಜಿಸುವ ದಿಟ್ಟನಾತ
ಗಂಭೀರನೆನ್ನಲೆ ? ಭಕ್ತರಿಗೆ ಮೃದು ಮಾತಿನ ತಂದೆಯಾಗಿದ್ದ
ಶಾಂತಿದೂತನೆನ್ನಲೆ ? ನಿಂದಕರಿಗೆ ಕಾಲರುದ್ರ ವೀರಭದ್ರನಂತಿದ್ದ
ವೀರಪುರುಷನೆನ್ನಲೆ ? ನೀಳಕೂದಲ ಬಾಚಿ ಜಡೆಯ ಹಾಕತಿದ್ದ
ಸ್ತ್ರೀಯೆನ್ನಲೇನವಗೆ ? ಜೊಂಡು ಮೀಸೆ ಹುರಿಮಾಡಿ ಸಡ್ಡು
ಹೊಡೆಯುತಿದ್ದ

ಅರ್ಧನಾರಿ ಶಿವನೆನಲೆ ? ಗೌರೀಪತಿಯಲ್ಲ ಜಗದ್ಗುರು ಪೀಠಾಧಿಪ
ಅಂತೆದು ಇಂತೆದು ಹೇಳಲಿಕ್ಕೆ ಬಾರದಂಥೆ
ಮುದುಕ ನಮ್ಮ ಮಧ್ಯದಲಿ ಮೆರೆದು ಹೋದ
ಹೋಗಿಲ್ಲ ಮರೆತಿಲ್ಲ ಈಗಲು ಆತಿದ್ದಾನ
ರುದ್ರಮುನೀಶ್ವರರಲ್ಲಿ ಲೀಲೆ ತೋರಿ ಮೆರಿತಾನ
ಸಾವಿಲ್ಲದ ಕೇಡಿಲ್ಲದ ಮರೆಯಾಗದ ಮುದುಕ
ಮುಕ್ತಿ ಮಂದಿರಾಶ್ರಮದ ಸಂಸ್ಥಾಪಕ ಆ ಮುದುಕ ॥ ○

## ಕಡ್ಲಿಮಟ್ಟಿ ಕಾಶೀಭಾಯಿ

ರಾಗ:– ಶುದ್ಧ ಸೀಲು                                                    ತಾಲ:–ಡಪ್ಪ ಕೇರವಾ

ಕಡ್ಲಿಮಟ್ಟಿಯ ಕಾಶಿಬಾಯಿಯ ಶೀಲದ ಚಾರಿತ್ರ
ಕೇಳಿದ ಜನ ಮನ ಪಾವಿತ್ರ । ಗುಣಮನ ಪಾವಿತ್ರ ॥

ವರುಷದ ಕೂಸು ಬಗಲಾಗೈತಿ । ಬುತ್ತಿ ಗಂಟು ತಲಿ ಮ್ಯಾಗೈತಿ
ಹೊರಟಾಳ ಊರಿಗೆ । ಹಬ್ಬಕ । ಹೊರಟಾಳ ಊರಿಗೆ
ಹುಬ್ಬಳ್ಳಿ ಟ್ರೇನ ಲೇಟಾಗೈತಿ । ಕಡ್ಲಿಮಟ್ಟಿಗಿಳಿದಾಳ ರಾತ್ರ್ಯಾಗೈತಿ
ಯಾರೂ ಇಲ್ಲಲ್ಲಿ ಮಾಸ್ತರನ ಬಿಟ್ಟಾರಿಲ್ಲಲ್ಲಿ ॥

ಹರೆಯದ ಹೆಣ್ಣ ಕಾಶಿಬಾಯಿ । ಬಂಗಾರ ಬಣ್ಣ ಚಂದುಳ್ಳ ತಾಯಿ
ರೂಪಕ ಮರುಳಾದ । ಮಾಸ್ತರ ! ರೂಪಕ ಮರುಳಾದ
ಹರದಾರಿ ಐತಿ ಕಡ್ಲಿಮಟ್ಟಿ । ಕತ್ಲಾಗೈತಿ ನೀ ಹ್ಯಾಂಗೋಗ್ತಿ
ಇಲ್ಲೆ ಮಲಗವ್ವ ತಂಗಿ ಕೋಲ್ಯಾಗ ಇರುವವ್ವ ॥

ತನ್ನಾಪೀಸು ಕೊಟ್ಟಾನಕಿಗಿ। ಹೊರಗ ಮಲ್ಕೊಂಡ ತಾ ಬಾಕೀಗಿ
ನಿದ್ರೆಯೆ ಬರಲಿಲ್ಲ । ಅವನಿಗೆ । ನಿದ್ರೆಯೆ ಬರಲಿಲ್ಲ
ಕಣ್ಣಾಗ ನೆಟ್ಟೈತಿ ಆಕೆಯ ರೂಪ । ಕಾಮುಸನ್ನೆಯಲಿ
ಎದ್ದಾನ ಭೂಪ
ಕೋಲಿಗೆ ಬಂದಾನ ಕೀಲಿಯ ತಗಿಯಂತಂದಾನ
ಗಾಡಿಬರ್ತಾದ ಫೋನಮಾಡಬೇಕು । ಬಾಗಿಲ ತೆಗಿಯವ್ವ
ಟಿಕಿಟ ಕೊಡಬೇಕು
ಎಂದವ ಅಂದಾನ ಆಗಾಕಿ । ಬಾಗಿಲ ತೆಗೆದಾಳ
ಕೋಣ್ಯಾಗ ಹೋಗಿ ಚಿಲ್ಕಾ ಹಾಕಿ । ಕಣ್ಸನ್ನೆ ಮಾಡಿ ಸಿಳ್ಳನು ಹಾಕಿ
ಹುಬ್ಬ ಹಾರಸ್ಯಾನ ತೆಕ್ಕ್ಯಾಗ ಅಪ್ಪಾಕ ಹೋಗ್ತಾನ ॥

ಮುಟ್ಟಬ್ಯಾಡಣ್ಣ ಗಂಡುಳ್ಳಾಕಿ । ನಿನ್ನ ಅಕ್ಕ ತಂಗೇರಂತಾಕಿ
ಶೀಲಾ ಕೆಡ್ಸಬ್ಯಾಡ । ಎಣ್ಣಾ । ಶೀಲಾ ಕೆಡಸಬ್ಯಾಡ
ಎಷ್ಟು ಹೇಳಿದರೂ ಕೇಳ್ಳಿಲ್ಲಾತ । ದುಷ್ಟ ಶ್ಟೇಶನ್ ಮಾಸ್ತರನೀತ
ಎಂದು ತಿಳಿದಾಳ ಕ್ಷಣದಾಗ ಹಂಚಿಕಿ ಹೂಡ್ಯಾಳ ॥

ನನ್ನ ಗಂಡ ಬಾಳ ಹಳ್ಳಿಹುಂಬ । ನೀವು ಕಲ್ತೋರು ಶಾಣೆರು ಸಾಬ್ರ
ನಿಮ್ಮ ಜತಿಗೂಡಿ । ಬಾಳ್ತೀನಿ । ನಿಮ್ಮ ಜತೆಗೂಡಿ
ಒಂದಾಕ ಹೋಗಿ ಬರ್ತೀನಿ ತಡಿರಿ । ನಿಮ್ಮವಳಾಗಿ ಸುಖಕೊಡತೀನಿ
ಎಂದು ಹೊರಗ್ಹೋಗಿ ಬಾಗಿಲ ಹಾಕ್ಕೊಂಡು ಬೈಯ್ತಾಳ ॥

ಸುಮ್ಮನೆ ಒಳಗಬಂದರ ಪಾಡ । ಬರದಿದ್ರ ನಿನ್ನಮಗುವಿನ್ನ ನೋಡ
ಕೊಂದು ಹಾಕತೀನಿ । ಈಚೂರಿಲೆ । ಕೊಂದು ಹಾಕತೀನಿ
ಕಣ್ಣೀರಕೋಡಿ ಹರಿಸುತ ತಾಯಿ । ಬಡಕೊಳ್ತಾಳ ಎದಿಕೈಬಾಯಿ
ಯಾರು ಕೇಳಬೇಕು ಅಕಿ ಗೋಳ ಯಾರು ಕೇಳಬೇಕು ॥
ಒಂದೆ ಸವನೆ ಕರಿತಾನವನು । ಗಟ್ಟಿಧೈರ್ಯಮಾಡಿ ನಿಂತಾಳಿವಳು
ಚೂರಿಲೆ ಕೂಸೀನ್ನ । ಬೆರಳ । ಕತ್ತರಿಸ್ಯಾನ
ಒಂದೊಂದು ಬೆರಳ ಕತ್ತರಿಸುತ್ತ । ಬಾಯೆಂದು ಕರಿತಾನಗದ್ದರಿಸುತ್ತ
ಕಲ್ಲ ಮಾಡ್ಯಾಳ ಮನಸ ಕಲ್ಲಾಗ್ಸಿ ನಿಂತಾಳ ॥
ಅವ್ವಾ ಅವ್ವಾ ಎಂದು ಕೂಸಳತಾದ । ಕೈಯಿಂದ ನೆತ್ತರ
ಜಿಗಿಯುತಲಾದ
ನೋಡಿ ಬೆರಗಾದ್ಲು ಎದಿ । ಒಡದು । ನೀರೇ ತಾನಾದ್ಲು
ಗಡ ಗಡ ಬಾರೆ ಬರದಿದ್ರ ನೋಡೆ । ಎಂದು ಚೀರುತ್ತ ಮತ್ತ
ಚೂರೀಲೆ
ಕೈಯ್ಯ ಕತ್ತರಿಸಿ ಹೊರಗದ್ನ ಚೆಲ್ಯಾನ ಚಾಂಡಾಲಾ ॥
ಮಗುವಿನ ಬೆರಳ ಮುಂಡಾದ ಕೈಯ್ಯ । ಸವರಾಡಿ ಎತ್ತಿ ಮುದ್ದಿಟ್ಟಾಳ
ಉಡಿಯಲಿ ಕಟ್ಟ್ಯಾಳ । ಕಣ್ಣಾಲಿ ರಕ್ತವ ಹರಿಸ್ಯಾಳ
ಬರದಿದ್ರೆ ನಿನ್ನ ಕೂಸಿನ ತಲಿಯ । ಕಡಿದು ಹಾಕ್ತಿನಿ ಬಾರೆಲೆ ಪ್ರೀಯೆ
ಎಂದು ಚೀರ್ಯಾನ ಮತ್ತೊಂದು ಕೈಯ್ಯ ಕಡದಾನ ॥
ಕಾಮದಾಸೆಗವ ಕಟುಕಾಗ್ಯಾನ। ಪತಿಗೆಡೆ ನಾನೆಂದು ಗಟ್ಯಾಗ್ಯಾಳ
ಮಗುವಿನ ಪ್ರಾಣವು । ಹೋದ್ರೇನು । ಮಗುವಿನ ಪ್ರಾಣವು
ಮಾನದೊಡ್ಡದೆಂದು ಚೀರ್ಹೇಳ್ಯಾಳ । ಗಂಡುಳ್ಳ ಸತಿನಾ ಇಂಥೆ
ಮಕ್ಕಳ
ನೂರು ಹಡೀಬಹುದು ಗಂಡಗ ಮೀಸಲು ಈ ದೇಹ ॥
ಚಾಂಡಾಲ ಚೀರಿ ಕರೆಯುತಲ್ಹಾನ । ಮುಂಡಗೈ ಕೂಸುಚೀರುತಲ್ಹಾದ
ಮತ್ತೊಂದು ಕಾಲನ್ನ ಕಡಿದು । ಆಕಿ ಮುಂದ ಚಲ್ಲ್ಯಾನ
ಆ ಕಾಲ ಈ ಕಾಲ ಎರಡೂ ಕಾಲ । ಕಟ ಕಟಕಡದು ಹೊರಗೊಗದಾನ
ಕೂಸಿನ ಜುಟ್ಟವ ಹಿಡಿದು ರುಂಡವ ಕಡಿದಾನ ॥

ಆಟದ ಚಂಡ ತೂರಾಡಿದಂಗ । ಕೂಸಿನ ರುಂಡ ಒಗದಾನ ಹೊರಗ
ವಿಲಿ ವಿಲಿ ಒದ್ದಾಡಿ ರುಂಡ ಹಾರಾಡಿ ಬೀಳ್ತಾದ
ಇಲ್ಲೀತನ್ಕ ಗಟ್ಟ್ಯಾಗಿದ್ದವ್ವು । ಗಡ ಗಡ ಈಗ ನಡಗುತ್ತಿಹಳು
ರುಂಡವ ತೆಕ್ಕ್ಯಾಗ ಬಡ್ಕೊಂಡು ಬೋರಾಡಿ ಅತ್ತಾಳ ॥
ಇಷ್ಟಾಗೂದ್ರಾಗ ಗೂಡ್ಸಗಾಡಿ । ಬಂದೈತಿ ಡ್ರೈವರ ಬಂದಾನ ಓಡಿ
ಕೈಕಾಲ ಕಟ್ಟ್ಯಾನ ಮಾಸ್ತರ್ನ ಜೇಲಿಗೆ ಹಾಕ್ಸ್ಯಾನ
ದುಷ್ಟಮಾಸ್ತರನ ಗಲ್ಲಿಗೇರಿಸಿ । ಕಾಶಿಬಾಯಿಗೆ ಬಹುಮಾನ ಕೊಡಿಸಿ
ಹೆಣ್ಣಿನ ಧರ್ಮವ ಸರ್ಕಾರ ಮೆರಿಸ್ಯಾದ ಜಗದಾಗ ॥ ○

## ಕಂಡೋರ ಕಂಡು

ರಾಗ:–ಭೀಮಪ್ಲಾಸ ತಾಲ:–ಕೆಹರವಾ

ಕಂಡೋರ ಕಂಡು ಕೌದಿ ಹೊಲಿದರೆ ದಾಟು ಹೊಲಿಗೆಯಂತೆ
ಆದರ್ಶ ಜನರಂತೆಲ್ಲಾರು ಮಾಡ್ದರೆ ಚಂದಾಗಿ ಕಾಣೋದಿಲ್ಲಂತೆ
ತಿಳಿದು ನೋಡಿರಿ ಜನರಲ್ಲಿ । ತಿಳಿದು ನಡೆಯಿರಿ ಜಗದಲ್ಲಿ ॥
ಮುತ್ತುಗದ ಹೂ ಎಷ್ಟಿದ್ದರೇನು ಮಲ್ಲಿಗೆಯಂತೆ ನಾರೋಲ್ಲ
ಬಿಳಿಬಣ್ಣದೆಮ್ಮೆ ಚಂದಿದ್ದರೇನು ಎತ್ತುಎನ್ನಿಸಿಕೊಳ್ಳೋಲ್ಲ
ಕತ್ತೆಯನೆಷ್ಟು ತಿಕ್ಕಿದರೇನು ಔಲಾದಿ ಕುದುರೆಯಾಗೋದಿಲ್ಲ
ಹಂದಿಯು ತಂದು ಸಿಂಗರಿಸಿದರೇನು ನಂದಿಯೆಂದೂ ಆಗೋದಿಲ್ಲ
ಕುಲಗೇಡಿಗೆ ಪಟ್ಟವ ಕಟ್ಟಿದರೆ ಪೂಜ್ಯಾತ್ಮನೆಂದೂ ಅವನಾಗೋಲ್ಲ॥
ಎಲ್ಲ ಕಟ್ಟಿಗೆ ಎಲ್ಲಲೋಹಗಳು ದೇವರ ಪ್ರತಿಮೆಗಳಾಗೋಲ್ಲ
ಷಟ್ಪದಿ ಬರೆವ ಜನಗಳೆಲ್ಲ ರಾಘವಾಂಕ ಜೈಮಿನಿಯರಾಗೋಲ್ಲ
ಶಿಲ್ಪ ಕೆತ್ತಿದ ಕಲೆಗಾರರೆಲ್ಲ ಜಕ್ಕಣ ಡಕ್ಕಣರಾಗ್ಲಿಲ್ಲ
ಚಿತ್ರಕಾರರು ಅದೆಷ್ಟು ಬೆಳೆದರು ರವಿವರ್ಮನ ಹೆಸರಳಿಸಿಲ್ಲ
ಗುರು ಗುರು ಎನ್ನುವ ಗುರುಗಳೆಲ್ಲರು ಅಲ್ಲಮ ರೇಣುಕರಾಗ್ಲಿಲ್ಲ ॥
ಕಟೆದ ಕಲ್ಲೆಲ್ಲ ಲಿಂಗಲ್ಲ ನಿಂತ ನೀರೆಲ್ಲ ತೀರ್ಥಲ್ಲ
ಬರೆಯುವ ಮಂದಿ ಹೆಚ್ಚಾದರೇನು ದಾಸ ಶರಣರ ಮರೆಸಿಲ್ಲ
ಪೂಜೆ ಮಾಡೋರೆಲ್ಲ ಪರಮ ತಪಸ್ವಿ ಹಾರ್ನಳ್ಳಿ ಸ್ವಾಮಿಯಾಗೋಲ್ಲ

ಮುದುಕರಾದ ಸನ್ಯಾಸಿಗಳೆಲ್ಲ ಜಡೆತಾತ ಎರೆ ತಾತರಂತಲ್ಲ
ಯೋಗಿಗಳಾದವರೆಲ್ಲ ಅಥಣಿ ಶಿವಯೋಗಿಮುರುಗೇಂದ್ರರಾಗ್ಲಿಲ್ಲ ॥

ಬೆಳೆದುದೆಲ್ಲ ಅಂದಲ್ಲ ಅರೆದುದೆಲ್ಲ ಗಂಧಲ್ಲ
ಉರಿದುರಿದು ಬೆಳಕಾದುದೆಲ್ಲ ನಂದಾದೀಪದಾರತಿಯಲ್ಲ
ತಲೆಬೋಳಿಸಿ ಬೆತ್ತಹಿಡಿದವರೆಲ್ಲ ಮಹಾತ್ಮಾ ಗಾಂಧಿಯಾಗೊಲ್ಲ
ಶಾಸ್ತ್ರಹೇಳುವ ಹೆಂಗಸರೆಲ್ಲ ಅಕ್ಕಮಹಾದೇವಿಯುಂತಿಲ್ಲ
ಹುಟ್ಟಿದ ಹೆಂಗಸರೆಲ್ಲ ಸಜ್ಜಲಗುಡ್ಡ ಶರಣಮ್ಮರಾಗೋಲ್ಲ ॥

ಹಚ್ಚಗಿದ್ದುದ್ದೆಲ್ಲ ಪತ್ರೆಲ್ಲ ಅರಳಿದ್ದುದೆಲ್ಲ ಹೂವಲ್ಲ
ಆಡಿದುದೆಲ್ಲ ಮಾತಲ್ಲ ಕಲೆತುದುದೆಲ್ಲ ಬಳಗಲ್ಲ
ಕಾಕಾ ಎಂದು ಕಾಗೆ ಅರಿಚಿದರೆ ಕೋಗಿಲೆ ಹಾಡಾಗೋದಿಲ್ಲ
ಗಾಯನ ವಾದನ ಕಲಿತವರೆಲ್ಲರೂ ಸಂಗೀತ ಪ್ರವೀಣರೇನಲ್ಲ
ಭಸ್ಮ ಧರಿಸಿ ಕೈಮುಗಿದವರೆಲ್ಲ ಜಗಜ್ಯೋತಿ ಬಸವಣ್ಣಲ್ಲ ॥

ಬೆಟ್ಟತಾನೆಷ್ಟು ಬೆಳದರೆ ಏನುಆಕಾಶವ ಮುಟ್ಟೋದಿಲ್ಲ
ತಿಳಿಯಾಗಿರುವ ನೀರೆಲ್ಲವು ಮಜ್ಜನಕೆ ಮಡಿ ನೀರಲ್ಲ
ಕೆಂಭೂತ ಥಕ ಥಕ ಕುಣಿದ ಮಾತ್ರಕೆ ನವಿಲೆಂದಾಗೋದಿಲ್ಲ
ಜೋಳಿಗೆ ಹಿಡಿದವರೆಲ್ಲ ಚಿತ್ತರಗಿ ಇಲಕಲ್ಲ ಮಹಾಂತರಾಗ್ಲಿಲ್ಲ
ಗಡ್ಡ ಜಡೆಗಳ ಬೆಳೆಸಿದವರೆಲ್ಲ ಸಿದ್ಧಲಿಂಗ ಜಗದ್ಗುರುವಲ್ಲ ॥

ಸ್ವಾಮಿಆನಂದ ಹೆಸರಿನವರೆಷ್ಟೋ ವಿವೇಕಾನಂದರಾಗ್ಲಿಲ್ಲ
ಆರೂಢ ನಾಮದ ಸಾಧುಗಳೆಷ್ಟೋ ಸಿದ್ಧಾರೂಢರವರೇನಲ್ಲ
ಹೇಳುವ ಕೇಳುವ ಆಳುವ ಜನರೆಷ್ಟಾದರೂ ದೇಶ ಚಂದಾಗಿಲ್ಲ
ತಿರಿದುಣ್ಣುವ ದಾಸಯ್ಯಗಳೆಲ್ಲ ಕನಕ ಪುರಂಧರರೇನಲ್ಲ
ಮಠದಯ್ಯಗಳು ಸಹಸ್ರಾರು ಜನರು ಕಲಿಪುರ ಖಾಸಯ್ಯರಂತಿಲ್ಲ ॥

# ಮೃಡಗಿರಿ ಜ್ಯೋತಿ

ರಾಗಃ-ಜೋಗಿಯಾ ತಾಲಃ-ದೀಪಚಂದಿ

ಮೃಡಗಿರಿಯ ಮಹಾ ಜ್ಯೋತಿ । ಅನ್ನದಾನಿ ಗುರುಮೂರ್ತಿ
ಶ್ರೀಮದನಾದಿ ನಿರಂಜನ ಪ್ರಭು ಮೂರ್ತಿ ॥
ಧರೆಗಿಳಿದು ಬೆಳಕಾಯ್ತು ಮೃಡಗಿರಿಯ ಜ್ಯೋತಿ
ವೆಂಕಟಾಪುರದನ್ನದಾನಿ ಜಗದ್ಗುರು ಮೂರ್ತಿ ॥

ವೆಂಕಟಾಪುರ ಗ್ರಾಮದ ಹಿರೇಮಠದಲ್ಲಿ
ಆದಯ್ಯ ಪರಮ್ಮರ ಪರೋದರದಲ್ಲಿ
ಶಂಕರನೆ ತಾನೆಂಬ ಸಂದೇಶದಲ್ಲಿ
ನಾಗಭೂಷಣ ನಾಮದಿ ಬೆಳಕಾದನಲ್ಲಿ
ಅನ್ನದಾನಿ ಶಿವಮೂರ್ತಿ ಮೃಡಗಿರಿ ಗುರುಮೂರ್ತಿ ॥

ಶಿವಯೋಗ ಮಂದಿರಕಾಗಮಿಸುತಲ್ಲಿ
ಹಾನಗಲ್ಲ ಗುರುಕುಮಾರನಾಶ್ರಯದಲ್ಲಿ
ವೀರಶೈವ ಧರ್ಮ ಸಂಸ್ಕೃತಿ ವ್ಯಾಸಂಗಿಯಾದ
ಕೆಲಕಾಲವಲ್ಲಿದ್ದು ಯೋಗ ಸಾಧನೆ ಗೈದ
ಶಿವಯೋಗದೊಳು ಬಲ್ಲಿದನು ತಾನಾದ

ಜಗಜಟ್ಟಿಯಂಥೆ ದೃಢಕಾಯ
ಜಗವನ್ನೆ ನಂಬಿದ ವಿಶಾಲ ಹೃದಯ
ಬಾಗುವ ಭಕ್ತರ ಭಕ್ತಿಯ ಕೊಳ್ಳುತ
ಬೇಡಿದಿಷ್ಟವ ನೀಡಿ ಪೊರೆದ ಪುನೀತ
ಮೃಡಗಿರಿಯೊಳ್ ಮೃಡನಾದ ಪರಮ ಜಾಗ್ರತನಾತ ॥

ಮಕ್ಕಳಿಲ್ಲದವರಿಗೆ ಮಕ್ಕಳ ಭಾಗ್ಯವ ಕೊಟ್ಟ
ನಿಷ್ಠಾವಂತರಿಗೊಲಿದು ಸಿರಿಸಂಪದವನೆ ಇತ್ತ
ಸತ್ತ ಮಗುವಿಗೆ ಪ್ರಾಣವಿತ್ತ ಲೀಲಾಪುರುಷ
ದುಃಖಿಗಳ ಸಂತೈಸಿ ಹರಸಿ ಸೊಗ ನೀಡಿದ
ನಮ್ಮ ಕಣ್ಮನ ತುಂಬಿ ತಾನೆ ಬಯಲಾದ ॥

ಚಂದ್ರಶೇಖರರ ಮಂದಿರದಿಂದ ಕರೆತಂದು
ನನ್ನ ಪೀಠಾಧೀಶನಾಗು ಎಂದು ಹರಸಿದನು
ರವಿಗುರು ತಾ ತನ್ನ ಪ್ರಭೆಯ ಶಿಷ್ಯ ಚಂದ್ರನಲ್ಲಿಟ್ಟು
ಬೆಳಗುತಿಹನು ಶಿಷ್ಯ ಚಂದ್ರ ಅನ್ನದಾನಿ ಗುರುವಿನೊಳು
ರೂಪ ಬೇರೆ ಬೆಳಗುತಿಹನು ವೃಡಗಿರಿ ಶ್ರೀಪೀಠದೊಳು ॥



## ಮುಂಡರಗಿ ಮಾಹೇಶ

ರಾಗ:-ಭೂಪಾಲಿ ತಾಲ:-ದಾದರಾ

ಮುಂಡರಗಿ ಮಾಹೇಶ
ಗುರುವನ್ನದಾನೀಶ । ಕರುಣಾಳು ಪರಮೇಶ ॥
ಶಿವನ ಕೋರು ತಿಳಿಸುವ ಪರಮ ಜ್ಞಾನಿ
ಧರ್ಮ ಕೋರು ಬೇಡುವ ಕೋರಾನ್ನದಾನಿ
ಹಸಿದವರಿಗೆ ಅನ್ನ ಕೊಡುವ ಅನ್ನದಾನಿ
ವಿದ್ಯೆಕೊಟ್ಟು ಹರಸುವ ಜ್ಞಾನಾನ್ನ ದಾನಿ
ಮರ್ತ್ಯ ಬೆಳಗ ಬಂದ ಶಿವ ಮಾದಾನಿ
ಜನರೆಲ್ಲರ ಪೊರೆವ ಜಗದ್ಗುರು ಅನ್ನದಾನಿ ॥

ಸೊರಟೂರಿನ ಸಿರಿಗಾರ ಕರ್ತೃ ನೀನು
ಮಣಕೋಡದಿ ಮಹಿಮೆ ಗೈದ ಮಹಾದೇವನು
ಕುಕನೂರದಿ ಕುರುಹು ಮೆರೆದ ಮಹಿಮಾತ್ಮನು
ಹಿರೇವಡ್ಡಟ್ಟಿ ವಿರತ ಜಂಗಮ ನೀನು
ಅನ್ನದ ಗಿರಿ ವೃಡಗಿರಿಯ ಮಹದೈಸಿರಿ ನೀನು
ಜಗವ ತುಂಬಿ ಬೆಳಗುವ ಜಗದ್ಗುರುದೇವ ನೀನು ॥

ಅಂದು ಇದ್ದ ಎಳೆಯ ನೀನು ನಿರಂಜನ ಶಿವನು
ಮುಂಡರಗಿ ವಾಸಿ ನೀನು ವೃಡಗಿರೀಶನು
ಅಂದು ಇಂದು ಬೆಳಗುತಿರುವ ಅಮರಾತ್ಮನು

ಬೆಂದು ನೊಂದು ಬಂದವರ ಪೊರೆವ ಕರುಣಾಕರನು
ತಂದೆ ತಾಯಿಯಾಗಿ ನಮ್ಮ ಕಾಪಾಡುತಲಿಹನು
ಜಗದ್ಭರಿತ ಜಂಗಮ ಶ್ರೀ ಜಗದ್ಗುರು ದೇವನು ॥ ೦

## ಇಂಥ ಬಾಳು

ರಾಗ:- ಪರಮೇಶ್ವರ ತಾಲ:- ದಾದರಾ

ಇಂಥ ಬಾಳು । ಸಂತತ ನೀ ಬಾಳು
ಶಂತ ಶರಣರೊಪ್ಪುವಂತೆ ಬಾಳು
ಶಾಂತವೀರ ಸ್ವಾಮಿಯಂತೆ ಬಾಳು ॥

ಸಿಂದಗಿ ಶಿವ ಸಿರಿಯಾಗಿ ಬೆಳೆದು ಸಿಂತಾನ-
ಲಿಂಗ ಸತ್ವ ಸಿಂಧೂರವಾಗಿ ತೋರ್ಯಾನ
ಶಿವಯೋಗ ಮಂದಿರದ ಕಂದನಾಗಿ ಬೆಳದಾನ
ಗುರು ಭಕ್ತಿ ಭಾಂಡಾರವಾಗಿ ಸಂಘಿಯಾಗ್ಯಾನ
ತಂದೆ ಗುರುಕುಮಾರನಾಸೆ ಭಟ್ಟ ಇಳಿಸಿಕೊಂಡಾನ
ಸಿಂದಗಿಯ ಹಿರಿಯ ಮಠದ ಅಧಿಕಾರಿಯಾಗ್ಯಾನ
ಶಾಂತವೀರ ಸ್ವಾಮಿ ಎಂದು ನಾಡಲಿ ಹೆಸರಾಗ್ಯಾನ ॥

ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ
ಏಳು ಪಾಠಶಾಲೆಗಳ ಸ್ಥಾಪನೆ ಮಾಡ್ಯಾನ
ಷಟಸ್ಥಲದ ಸತ್ವ ತತ್ವ ಕಲಿಸಿ ಬೆಳಿಸ್ಯಾನ
ಸಪ್ತ ಪಾಠಶಾಲೆಗಳ ಏಳು ಪತ್ತು ಎಪ್ಪತ್ತು
ಷಟಸ್ಥಲ ಬ್ರಹ್ಮ ತಾನಾದ ಕುರುಹ ಆರಾಯ್ತು
ಏಳು ಆರು (೭೬) ಎಪ್ಪತ್ತಾರು ವರುಷ ಬಾಳಿ ಬೆಳಗ್ಯಾನ
ಲಿಂಗದಲ್ಲಿ ಬಯಲಾಗಿ ಲಿಂಗ ದೇಹಿಯಾಗ್ಯಾನ ॥

ಗುರು ಸ್ಥಲದ ಬೆಳಕಾಗಿ ಬೆಳಗ್ಯಾನ ವೀರತ್ವದಿ
ವಿರತ ಸ್ಥಲದ ಕರುಳಾಗಿ ಬಾಳ್ಯಾನ ಶಾಂತತ್ವದಿ

ಗುರು ಘನತೆಗೆ ಗುರು ಚರಿತಗೆ ಹಗಲಿರುಳು ದುಡಿದಾನ
ವಿರತಿ ಬೆಲೆಗೆ ವಿರತ ಕಲೆಗೆ ಸಹಕಾರ ನೀಡ್ಯಾನ
ವಿರಕ್ತ ಸ್ಥಲಕೆ ಸಿದ್ಧರಾಮದೇವರನ್ನೆ ಕೊಟ್ಟಾನ
ಶಾಂತವೀರ ಸಹಕಾರದ ರೂಹು ಸಿದ್ಧರಾಮರು
ತೋಂಟದಾರ್ಯರ ಪೀಠದ ಜಗದ್ಗುರುವಾಗಿ ಮೆರೆವರು
ವಿರತಿ ಪ್ರಭೆಗೆ ತನ್ನ ಕರುಳ ಬತ್ತಿ ಮಾಡ್ಯಾನ
ಕುಮಾರ ಜ್ಯೋತಿ ಮುಡಿಸಿ ಬಸವ ಬೆಳಗ ಬೆಳಗ್ಯಾನ= ○

## ಕಲಿದೇವ ಸುಗುರೇಶ

ರಾಗ:- ಖಮಾಜ ತಾಲ:-ಖವಾಲಿ

ದೇವ ಬಾರೊ ಕಲಿದೇವ ಬಾರೋ
ಕಲಿದೇವರ ಸುಗುರೇಶ ಬಾರೊ ||

ಚನ್ನವೀರೇಶ್ವರ ಗುರುರಾಯ | ಚರಜಂಗಮಪತಿ ಮಹನೀಯ
ಶ್ರೀಕಲಿದೇವರ ಸುಗುರಯ್ಯ | ಶರಣು ಬಂದಿರುವೆ ಸಲಹಯ್ಯ ||

ವೀರನವತಾರಿ ಮಾಚೇಶ | ಮಾಚನವತಾರಿ ಚನವೀರೇಶ
ದೇವಸೂಗೂರು ಪುರವಾಸ | ಜೀವರ ಪೊರೆಯುವ ಪರಮೇಶ ||

ಕಲಿದೇವನ ಪುರ ಗುರುರಾಜ | ಕಲ್ಯಾಣ ಶಿವಶರಣರ ಸೂರ್ಯ
ವೀರಭದ್ರನ ನಿಜತೇಜ | ದೇವಸುಗುರು ರಾಜಾಧಿರಾಜ || ○

## ಪೂರ್ಣಾರಾಧನೆ

ರಾಗಃ-ಮಲಯ ಮಾರುತ ತಾಲಃ-ದಾದರಾ

ಆರೋಹಣ | ಅವರೋಹಣ
ಎರಡರ ಸಮ್ಮಿಲನ | ಜೀವದಾರಾಧನ
ನೂತನ ಪುರಾತನ | ಈ ಜಗ ಜೀವನ ||

ಜೀವ ಜನನ ಜೀವನದ ಆರೋಹಣ
ಜೀವ ಮರಣ ಜೀವನದ ಅವರೋಹಣ ||

ಧನ ಧಾನ್ಯ ಜ್ಞಾನ ಸನ್ಮಾನ । ಗಳಿಸುವದದೆ ರಂಜನದಾರೋಹಣ
ಧ್ಯಾನ ಮೌನ ಶಿವಸಿಧಾನ ದಾನ । ಗೈಯ್ಯುವದದೆ ನಿರಂಜನದವ-
-ರೋಹಣ ||

ನಿಜ ಹೇಳಿಕೆಯು ಜೀವಕೆ ಪಟ್ಟಾರೋಹಣ
ಗಳಿಕೆ ಬಳಸಿ ಬೆಳಕಾಗುವದೆ ಅವರೋಹಣ
ಉಭಯ ಕ್ರಿಯಾ ಮಿಲನ ಪರಶಿವ ಚಾಲನ
ಶಿವ ಚಾಲನದಲ್ಲಿದೆ ಗುರುಲಿಂಗ ಚೇತನ
ಎಲ್ಲಿ ಆರೋಹಣ ಅಲ್ಲಿದೆ ಅವರೋಹಣ
ಶಿವನ ಸಂಕಲ್ಪವದು ಎಲ್ಲಲ್ಲಿ ಸಂಸ್ಫುರಣ
ಈ ಭೋಗ ಶಿವಭೋಗ ಎನ್ನುವ ಸೌಭಾಗ್ಯ
ಶಿವ ಭಾಗ್ಯವಂತನಿಗೆ ಶಿದ್ಧಿ ಶಿವಯೋಗ
ಶಿವಯೋಗದ್ಹಬ್ಬದ ಸವಿ ಭೋಗ ಮಾ ಭೋಗ
ಅನುಭವಿಸಿ ಶಾಂತವೀರ ಶಿವಯೋಗವ ಜೀರ್ಣಿಸಿದ
ಶಿವರಾತ್ರಿಯಲ್ಲಿ ಸರಿಸಾಟಿಯಾಗಿ ತಾ ಬೆರೆದ
ಇವನ ಮರಣ ಇಹ ಜೀವನದವರೋಹಣ
ಈ ಅವರೋಹಣದಲ್ಲಿದೆ ಪೂರ್ಣತ್ವದಾರೋಹಣ ||

ಶಿವರಾತ್ರಿಯು ನಿಶೆಯು । ಲಿಂಗ ವರ್ಣಪ್ರಭೆಯು
ಅದು ಲಿಂಗ ರಾತ್ರಿ ರಾಶಿ । ಅದೇ ಶಿವರಾತ್ರಿ ಅಮವಾಸಿ
ಕಪ್ಪಿನಲ್ಲೊಪ್ಪಾತು ಶಾಂತವೀರ ಜೀವನ ಕಪ್ಪಾಯ್ತು ಲಿಂಗವಾಯ್ತು
-ಗುರು ಚೇತನ
ಗುರು ಪೀಠಾಚಾರ್ಯನ ಶ್ರೀ ಜೀವನ । ಕಪ್ಪಾದ ಸಾಕ್ಷಿಯಲ್ಲಿ
ಜನಮನ

ಆಯ್ತು ದುಃಖಾಂಧಕಾರ ಕಪ್ಪಿನಾಚ್ಛಾದನ
ಅದಕೆ ಹೊರತಾಗಲಿಲ್ಲ ಸಮಸ್ತ ಜಗ ಜೀವನ
ಎಂಬಂದಾಗಿ ತೋರಿತು ಖಗ್ರಾಸ ಸೂರ್ಯ ಗ್ರಹಣ
ಶಿವರಾತ್ರಿ ಗುರುರಾತ್ರಿ ಒಂದಾದ ಶುಭರಾತ್ರಿ
ಆರೋಹಣ ಅವರೋಹಣ ಸತತ ಕ್ರಮ ಧರಿತ್ರಿ ||

ಕತ್ತಲು ಬೆಳಕುಗಳ ಆರೋಹಣ ಅವರೋಹಣ
ಎಂಬುದೆ ಕ್ಷಣದೆ ಸಾರಿತಯ್ಯ ರವಿ ಗ್ರಹಣ
ಶಾಂತವೀರನವರೋಹಣದಲ್ಲಿ ಕಾಣು ಬೆಳುಪು
ಲಿಂಗದೇಹ ಕಪ್ಪಿನಲ್ಲಿ ಶಿವ ಕಾಂತಿಯು ಹೊಳಪು
ಆ ಹೊಳಪಿನ ಕರಣವದೆ । ಗುರು ಪಟ್ಟಾರೋಹಣ
ಶಾಂತವೀರ ಸತ್ತಿಲ್ಲ ಗುರು ಶಕ್ತಿ ಜಾಗ್ರುತ
ಎಂಬ ಸತ್ಯದಲ್ಲಿ ಅವನ ಪಟ್ಟ ಪಡೆದನೀತ
ಗುರುವಿನ ಅವರೋಹಣ । ಶಿಷ್ಯನ ಆರೋಹಣ
ಎರಡು ನಡೆದು ಗುರು ತತ್ವ ಶ್ರೀ ಚಿಗಂತನ ॥ ೦

## ಹಣದ ಹೆಣ

ರಾಗಃ=ಧನಾಶ್ರೀ ತಾಲಃ=ಝಂಪಾತಾಲ

ಹಣಕೆ ನೆಣ ಪಣವಿರಿಸಿ । ಕುಣಿ ಕುಣಿದು ಬಲು ದಣಿದು
ಕೊನೆಗೆ ಮೃತಿಯಪ್ಪಿಹುದು । ಕುಣಿಗೆ ದತ್ತುವಾಯಿತದು ॥

ಹಣ್ಣು ತಿನದೆ ಹಾಲುಣ್ಣದೆ । ಹಣ ಗಳಿಸಿ ಸತ್ತಿಹುದು
ಏನುಣದ ಬಾಯಿಗೀಗ । ಮಣ್ಣುಣಿಸಿ ಹಂಗಿದು ಬನ್ನಿ
ಹಣದಾಸೆಯು ಬಾಯಿ । ತೆರೆದಿದೆ ಹಣ ತುರುಕುವಿರಾ
ಏನದರ ಗೊಡವೆಂದು । ಹುಗಿದ್ಹೋಳಿಗುಣ್ಣುವಿರಾ ? ॥

ಕೈವಾಲಿ ಏರಿದರು । ಕೈಮುಂದೆ ಮಾಡಿಹುದು
ಗೋಣುಲಿಸಿ ಬೇಕೆಂದು । ಹೊನ್ನಾದಿ ಬೇಡುವದು
ಕುಣಿಗ್ಹೋಗುವದೆ ತಡ । ಆಭರಣ ಕಿತ್ತುವರು
ನಿನ್ನದೇನಿಲ್ಲವೆಂದೆಲ್ಲ । ಕಸಿದು ನಿನ್ನ ಹುಗಿಯುವರು ॥

ಸತಿ ಸುತರು ಪತಿ ಬಳಗ । ಅತಿ ಸಿರಿಯು ನನ್ನದೆಂದು
ಅತಿಯಾಗಿ ಪ್ರೀತಿಸಿದೆ । ಅವುಗಳಿಗೆ ನೀ ಬಾಳಿದೆ
ಧರ್ಮ ನೀತಿ ತಾಯಿ ಧರತಿ ! ದೇವರನ್ನೆ ಮರತಿದ್ದೆ
ದೇವ ಧರ್ಮ ಕೊನೆಗೆ ಜತಿ । ಭೂ ತಾಯಿಯಾಸರೆ ನಿನಗೆ ॥ ೦

# ವೀರಶೈವರು

ರಾಗಃ–ಛಾಂಯೊಾಧನ್ ತಾಲ:–ದಾದರಾ

ವೀರಶೈವರು ನಾವು ವೀರಶೈವರು
ಲಿಂಗವಂತರು ಎಲ್ಲಾ ವೀರಶೈವರು ||
ಲಿಂಗ ಧರಿಸಿ ಲಿಂಗ ಯಜಿಸಿ ಲಿಂಗವಂತಿಗೆ
ಗಳಿಸಿ ಮೆರೆವ ಲಿಂಗ ಗುಣ ಶ್ರೀಮಂತರು ನಾವು ||

ಮೇಲು ಕೀಳೆಂಬುವ ಒಣ ಜಗಳವ ತರಿಸಿ
ಜಾತಿಗಳ ಕಲ್ಪಿಸಿ ಬೇರೆ ಬೇರೆ ಹೆಸರಿರಿಸಿ
ಬಡಿದಾಡುವ ಬಡವರಲ್ಲ ಶಾಂತಿ ಗುಣವಂತರು
ಸಹಕಾರದ ಗುಣಿಗಳು ಲಿಂಗವಂತರಾದವರು ||

ಪಂಚಾಯತ ಕಟ್ಟೆ ಏರಿ ನ್ಯಾಯ ಹೇಳುವಂಥವರಿಗೆ
ಪಂಚಮಸಾಲೇರು ಎಂದು ಬಂದಿತು ಹೆಸರು
ಲೆಖ್ಖ ಹಾಕಿ ತಕ್ಕಡಿಯ ಪಿಡಿದು ವ್ಯಾಪಾರವ
ಮಾಡುವವರು ಬಣಜಿಗರು ಶೆಟ್ಟರೆಂದಾದರು
ಕೆಸರಿನಲ್ಲಿ ದುಡಿವ ಒಕ್ಕಲಿಗರೆಲ್ಲ ಲಿಂಗ ತತ್ವ
ಬೆಳೆಯ ಬೆಳೆದು ಉಣ್ಣುವವರು ಲಿಂಗವಂತರು
ಮಣ್ಣು ತುಳಿತದಲ್ಲಿ ನಿರುತ ಕುಂಭ ಕಾಯಕ ಮಾಡ್ವ
ಕುಂಭಾರರು ಬೇರೆ ಅಲ್ಲ ಲಿಂಗವಂತರು ||

ನೂತು ಬಣ್ಣ ಹಾಕಿ ನೇಯ್ವ ಬಣಕಾರರು ನೇಕಾರರು
ಬಟ್ಟೆ ಹೊಲಿವ ಸಿಂಪಿಗರೆಲ್ಲ ಲಿಂಗವಂತರು
ಕಲ್ಲು ಕಟೆದು ಶಿಲ್ಪ ಕಲೆಯ ಗುಡಿ ಮಂದಿರ ಮಠಗಳಂ
ಮಾಡ್ವ ಕಲ್ಲು ಕುಟಿಗರೆಲ್ಲ ಲಿಂಗವಂತರು
ಗುರುವಿತ್ತ ಲಿಂಗದಲ್ಲಿ ಕುರುಹು ಕಾಂಬ ಕುರುಹಿನ
ಶ್ರೇಷ್ಠಿಗಳು ಮೇಣ್ ಕುರುಬರು ಲಿಂಗವಂತರು
ಸರ್ವರು ಸಹೋದರರೆಂಬುವ ಭಾವದಲ್ಲಿ ಬಾಳುವಂಥೆ

ಗುಣವಂತರೆ ಸಾದರವರೆ ಲಿಂಗವಂತರು
ಲಿಂಗ ನೆಲೆಯು ಅಂಗ ತೊಳೆವ ಅಗಸರಾದಿ ಹಡಪಿಗರು
ಪುರದ ಹೊಲಸ ಅಳಿವರೆಲ್ಲ ಲಿಂಗವಂತರು ||
ಕಬ್ಬಿಣವ ಕಾಸಿ ಬಡಿದು ನೇಗಿಲಾದಿಗಳ ಮಾಳ್ಪ
ಕಮ್ಮಾರರು ಯಾರೋ ಅಲ್ಲ ಲಿಂಗವಂತರು
ಬೆಳ್ಳಿ ಬಂಗಾರ ಮುತ್ತು ರತ್ನದಾಭರಣ ಮಾಡುವ
ಪತ್ತಾರರು ಕಟ್ಟಿಗೆ ಕೆತ್ತುವ ಬಡಿಗೇರಾದಿಗಳು
ರುದ್ರ ವೀರಭದ್ರ ಪುರವಂತರು ಲಿಂಗವಂತರು
ತಿರಿದು ತಂದು ಕರೆದುಣ್ಣಿಸಿ ತತ್ವತಿಳಿಸಿ ಪೊರೆವ ಶಿವ
ಗಣಾಚಾರ ವ್ರತದ ಗಣರು ವೀರಶೈವರು
ಬ್ರಹ್ಮಜ್ಞಾನ ಲಿಂಗಜ್ಞಾನ ಒಂದೆಂದು ಲಿಂಗವಧರಿಸಿ
ವೇದ ಪಠಣ ಗೆಯ್ವ ಬ್ರಾಹ್ಮಣರು ವೀರಶೈವರು
ಹಲವು ಕಾಯಕದಿಂದ ಮಠ ಮಠಪತಿ ಗಣಾಚಾರಿ
ಎಂದು ಹೆಸರಾದ ಜಂಗಮರೊಂದೆ ವೀರಶೈವರು ||

ಕಾಸಿ ಕೆತ್ತಿ ಕಟೆವ ತೊಳೆವ ವಿವಿಧ ಕಲೆಗಾರರು
ಎಲ್ಲ ಕಾಯಕದವರು ಲಿಂಗವಂತರು ವೀರಶೈವರು
ಕಲೆಯು ಕಸಬಿನಲ್ಲಿ ಜಗವ ಬೆಳಗಿಪ ಬೆಲೆಗಾರರು
ಬೇರಲ್ಲ ಒಂದೆ ಲಿಂಗವಂತರು ವೀರಶೈವರು
ಕಲೆಯು ತಲೆಗೆ ಕುಲದ ಕುಂಚಿಗೆ ಕುಲಾಯಿ ಕಟ್ಟೋರು
ನಾವೆಲ್ಲ ಲಿಂಗವಂತ ವೀರಶೈವರು
ಜಗದ ಕಲೆಯು ಬೆಳೆಸಿ ಲಿಂಗ ಕಲೆಯುಲೊಂದಾಗುವ
ಲಿಂಗ ಕಲಾವಂತರು ಲಿಂಗ ಗುಣ ಧೀಮಂತರು ||
ಮಾಡುವಂಥೆ ಕಾಯಕದ ಹೆಸರಿನಲ್ಲಿ ಜಾತಿ ಎಂಬ
ಮೂಢನಾಮದಿಂದ ಎಮ್ಮ ಕರೆಯಬೇಡಿರಿ

ಜಾತಿ ಬೇರೆ ಧರ್ಮ ಬೇರೆ ಅರಿತು ಕರೆಯಿರೆಮ್ಮ ಧರ್ಮ
ವೀರಶಿವನ ಶೈವ ವೀರಶೈವರೆನ್ನಿರಿ !
ನಮ್ಮ ಧರ್ಮ ವೀರಶೈವ ಧರ್ಮವೆಂದು ಹೇಳಿರಿ !
ರೇಣುಕಾಲ್ಲವು ಬಸವಾದಿಗಳ ಬಳಗವೆನ್ನಿರಿ !
ನಾವು ಒಂದೆ ವಿಶ್ವಧರ್ಮ ವೀರಶೈವರು !
ನಾವು ವೀರಶೈವ ಲಿಂಗವಂತ ಧರ್ಮದವರು
ಎಂದು ಹೇಳಿರಿ ! ಎಂದು ಬರೆಸಿರಿ !
ಎಂದು ಬರೆಯಿರಿ ! ಎಂದು ಘೋಷಿಸಿರಿ ! ○

## ಮಹಾಂತ ಯೋಗಿ ಬಂದಾನ

ರಾಗಃ- ತಿಲಕಾಮೋದ ತಾಲ:= ಕೆಹರವಾ

ಯೋಗಿ ಬಂದಾನ । ಮಹಾಂತ ಯೋಗಿ ಬಂದಾನ
ತ್ಯಾಗಿ ಬಂದಾನ । ಭಿಕ್ಷಾಂದೇಹಿ ಎಂದಾನ ॥

ಯಾರೂ ತಾರದ ಯಾರೂ ಹಿಡಿಯದ ಜೋಳಿಗೆ
ಹಿಡಿದಾನ । ಮಹಾಂತ ಜೋಳಿಗೆ ಪಿಡಿದಾನ ॥

ಹೊಟ್ಟೆ ಹೊರಿಯೋಕೆ ಹಿಡಿದಿಲ್ಲ । ಹಿಟ್ಟು ಕಾಳು ಕಡಿ ಕೇಳೋಲ್ಲ
ಭಕ್ತರ ಹಣವ ಬೇಡೋಲ್ಲ । ಬೆಳ್ಳಿ ಬಂಗಾರ ಬಯಸೋಲ್ಲ
ಮುಕ್ತಿಯು ಬೆಳಗನು ಭಕ್ತರ ಬಾಳಿಗೆ
ನೀಡಲು ಬಂದಿದೆ ಮಹಾಂತ ಜೋಳಿಗೆ
ಎಂದು ಸಾರಿ ಸಾರಿ ಹೇಳ್ಯಾನ ಹೇಳ್ತಾನ
ಜನರ ಚಟಗಳ ಭಿಕ್ಷೆಯು ಬೇಡಿ ನೀಡಿಸಿಕೊಳ್ತಾನ ॥

ಕೂಡಲ ಸಂಗನ ಒಲಿಸಲು ಬಂದ । ಪ್ರಸಾದಕಾಯವ ಕೆಡಿಸದಿರೆಂದ
ದುಷ್ಟ ಚಟಗಳ ಕಾಷ್ಟಕೆ ದೇಹ । ವಿಟ್ಟುಸುಟ್ಟುಹಾಳ್ಮಾಡುವದೇನು
ಎಂದು ಉಪದೇಶ ಮಾಡ್ತಾನ । ಕೆಟ್ಟ ಚಟದ ಭಿಕ್ಷೆ ಕೇಳ್ತಾನ
ನನ್ನ ಜೋಳಿಗೆ ಮಹಾಂತನ ಜೋಳಿಗೆಗ್ಹಾಕಿರೆಂತಾನ
ದೇಹಕಾರೋಗ್ಯ ಹರಸಿ ದೀರ್ಘಾಯುಷ್ಯವ ಕೊಡತಾನ ॥

ಶ್ರೇಷ್ಠ ಶಿವಗಾನ ಪಾಡುವ ಬಾಯಿಗೆ
ಚುಟ್ಟಾ ಸೇದುವ ತಂಬಾಕ ತಿನ್ನುವ
ಗಾಂಜಾ ಮೆಲ್ಲುವ ಸೇಂದಿ ಕುಡಿಯುವ
ಚಟ ಕಲಿಸಿ ಹಾಳು ಮಾಡದಿರಣ್ಣಾ
ನಾಶಿ ತಿಕ್ಕುವ ಓಸಿಯಾಡುವ
ಇಸ್ಪೇಟ ಜಟ ವೇಶ್ಯಾ ಕೂಟ
ಎಲ್ಲ ಹವ್ಯಾಸ ಬಿಡಿರೆಂತಾನ
ಮಹಾಂತ ಜೋಳಿಗೆಗ್ಹಾಕಿರೆನ್ನುತ ಭಿಕ್ಷೆಯು ಬೇಡ್ತಾನ ॥

ಇಂಥ ಜೋಳಿಗೆ ಯಾರೂ ಹಿಡಿದಿಲ್ಲ
ಇಂಥ ಯೋಗಿ ಯಾರ್‍ಯಾರು ಬಂದಿಲ್ಲ
ಎಂದು ಜನ ಜಾತ್ರೆ ನೆರಿತಾದ । ಮಹಾಂತ ಪಾವಕ ಬಾಗ್ತಾದ
ಇಂದಿನಿಂದ ಸೇದುವದು ಬಿಟ್ಟೆ । ಸೇಂದಿ ಸೆರೆ ಕುಡೇದು ಬಿಟ್ಟೆ
ಜೂಜನು ಬಿಟ್ಟೆ ವೇಶ್ಯೆಯು ಬಿಟ್ಟೆ । ಎಂದು ಮಹಾಂತರಿಗ್ಹೇಳ್ತಾರ
ಅಂಥವರಿಗೆ ಮಹಾಂತಪ್ಪ ಆರೋಗ್ಯ ಭಾಗ್ಯವ ನೀಡ್ತಾನ
ಪ್ರಸಾದ ಕಾಯಿಗಳಾಗಿ ನೂರ್‍ವರುಷ ಬಾಳಿರೆಂದು ಹರಸ್ತಾನ ॥

ನನ್ನ ಗಂಡ ದಾರಿಗೆ ಬಂದ ಮಹಾಂತ ಸ್ವಾಮಿ ಕೃಪೆಯಿಂದ
ನನ್ನ ಮಗ ಚಟ ಬಿಟ್ಟಾನ ಮಹಾಂತಪ್ಪನ ದಯದಿಂದ

ನನ್ನ ತಮ್ಮ ನೀತಿವಂತಾದ ಮಹಾಂತೇಶನ ವರದಿಂದ
ನನ್ನ ಬಂಧುಗಳು ನನ್ನ ಊರವರು ಚಟಗಳ ಬಿಟ್ಟಾರ
ಸತಿ ಪತಿ ಸುಖ ಸಂಸಾರಿಗಳಾದರು ವಿಜಯಮಹಾಂತನ
ಹರಕೆಯಿಂದ

ನಮ್ಮ ಬಾಳಿನ ನಂಜ ನುಂಗಲು ಬಂದ ನಂಜುಂಡ ಶಿವನಪ್ಪ

ನಮ್ಮೆದುರಿಗೆ ಮಹಾಂತಪ್ಪನಾಗಿ ಬಂದಾನೆಂದು ಬಾಗುವರಪ್ಪ ॥
ಕಾಮ ಕ್ರೋಧಾದಿ ಭಿಕ್ಷೆಯು ಬೇಡಿ ನೀಡಿಸಿಕೊಳ್ತಾನ
ನೇಮ ನೀತಿಗಳ ಹರಕೆಯು ನೀಡಿ ಮಹಾಂತ ಮೆರಿತಾನ

ಶ್ರೀ. ಪ್ರ. ಬ್ರ. ಸಿದ್ಧರಾಜ ಶಿವಾಚಾರ್ಯ ಶಾಸ್ತ್ರಿ



ಊರೂರಿಗೆ ಪ್ರಭಾತಪೇರಿ
ಮಹಾಂತ ಸುಪ್ರಭಾತ ಬೇರಿ
ಭಕ್ತರ ಬಾಳಿಗೆ ಆಡರಿದ ಕತ್ತಲೆ ಕಳೆಯುತ ನಡೆದಾನ
ಮಹಾಂತ ಸೂರ್ಯನಿವನೆಂದು ಚಿತ್ತರಗಿ ಇಲಕಲ್ಲಿಗೆ ಕೈಮುಗಿತಾರ॥

............

## ಬೀಸುವೆನು

ರಾಗಃ ತಿಲಕ — ತಾಲ:– ಪಾದರಾ

ಬೀಸುವೆನು ಜೋಳ । ಬೀಸು ನೀ ತಂಗಿ
ಬೀಸುವೆನು ಬೀಸು ನಿತ್ಯ ಕಷ್ಟವೆಂಬ ಕಾಳ ॥

ಪತಿಯೆಂಬುದೊಂದು ಮೇಲಿರುವ ಕಲ್ಲು
ಸತಿಯೆಂಬುದೊಂದು ಕೆಳಗಿರುವ ಕಲ್ಲು
ಸತಿ ಪತಿ ಸಮರತಿಯೆಂಬ ಗೂಟ ನೆಟ್ಟು ಪಿಡಿದು
ಅತಿ ಕಷ್ಟಮಯ ಪುಣ್ಯ ಪೀಷ್ಟಭರಿತ ಕಾಳ ॥

ಧರ್ಮದ ಬಲಗಾಲ ಚಾಚಿ ಅಧರ್ಮದ ಎಡಗಾಲ ಮಡಚಿ
ಹದಿಬದಿ ಹಿಟ್ಟನು ಕೊಡುವ ಕಲ್ಲಿಗೆ ತನು ಬಾಗಿಸಿ
ಹರಧ್ಯಾನದಲ್ಲಿ ಮುಕ್ತಿ ಬಯಸಿ ಮುಕ್ಕನು ಹಾಕಿ
ಗುರು ಗುರು ಗುರು ಎಂಬ ಕಲ್ಲುಲಿ ಗಾನದಲಿ ಹಾಡಿ ॥

ಜನ್ಮ ತಿರುಗಿ ಅನುಭಾವ ಗಳಿಸಿದಂತೆ ಕಲ್ಲು ತಿರುಗಿ
ಶಿವಾನುಭವದ ಗುಟ್ಟದೆ ಹಿಟ್ಟು ಸುರಿಸಿ ಸೋಸಿ
ವರ ತತ್ವದ ಪಾಕ ಮಾಡಿ ಗುರುಪತಿರಾಯಗೆ ಉಣಿಸಿ
ಹರ ಚರ ಗಣ ಸಂತತಿಗೆ ತೃಪ್ತಿಗೈಸಲಿಚ್ಛಿಸಿ ॥

# ಬೆಲ್ಲದ ಬಾಗೇವಾಡಿ ವಿರತ

ರಾಗ:-ಕಾಪಿ ತಾಲ:-ದಾದರಾ

ಬೆಲ್ಲದ ಬಾಗೆವಾಡಿ ವಿರತ
ಅಲ್ಲಮ ಪ್ರಭು ರೂಪಿ ಶ್ರೀಮಹಾಂತ ||

ನೀನೆ ಭಾಗ್ಯವಾಗುದಿಸಿದೆ ಈ ವಾಡಿಗೆ
ಬಾಗೆವಾಡಿ ಎಂಬ ಹೆಸರು ರೂಢಿಗೊಂಡಿದೆ
ಭಕ್ತರಿಗೆ ಬೆಲ್ಲವಾದೆ ಶರಣರಿಗೆ ಸಕ್ಕರೆ
ಅಂತೆ ಬೆಲ್ಲದ ಬಾಗೆವಾಡಿ ಹೆಸರಾಗಿ ಮೆರೆದಿದೆ ||

ಬೆಲ್ಲದ ಬಾಗೆವಾಡಿಯ ಭಾಗ್ಯದ ನಿಧಿಯೆ
ಅಲ್ಲಮ ಪ್ರಭು ಸಾಂಪ್ರದಾಯ ಸಿರಿಯೆ
ಎಲ್ಲರಿಗೆ ಬೇಕಾದ ಬಲ್ಲಿದನು ನೀನೆ
ಸಲ್ಲೀಲೆಗೊಳುತ ಮೆರೆವೆ ವಿರತಮಠದೆ ||

ಮಹಾಂತ ಶ್ರೀಮಹಾಂತ ಗುರು ಮಹಾಂತ ಎಂದರೆ
ಹಂತ್ಯಾಕ ಬಂದು ಸದಾ ಕಾಪಾಡುತಿರುವೆ
ನಂಬಿದವರಿಗಂದವಿತ್ತು ಶಿವಾನಂದಗೊಡುವೆ
ತಂದೆ ತಾಯಿ ಬಂಧುವಾಗಿ ಸಕಲರನು ಪೊರೆದೆ ||

ಖುಲ್ಲ ಗುಣದ ಮನುಜರಿಗೆ ಕಲ್ಲಾಗಿ ತೋರುವೆ
ಒಳ್ಳೆ ಗುಣದ ಭಕುತರಿಗೆ ಮಲ್ಲಿಗೆ ಮೃದುವಾಗಿರುವೆ
ತನು ಮನದಿ ಸೇವೆ ಮಾಡಿ ಬಾಗುವಂತವರಿಗೆ
ಅನವರತ ಹರಸುತಿರುವ ಜಾಗ್ರುತ ಜಂಗಮವೆ ||

# ವರದಕ್ಷಿಣೆ

ರಾಗ:-ಮಿಶ್ರ ತಾಲಃ-ಖವಾಲಿ

ವರದಕ್ಷಿಣೆ ವರದಕ್ಷಿಣೆ ಎನ್ನುವ
ವರಗಳ ಸಂಖ್ಯೆ ಹೆಚ್ಚಾಯ್ತು
ದಕ್ಷಿಣೆ ಕೇಳುವ ವರಗಳ ಆಸೆಗೆ

ಒಳ್ಳೊಳ್ಳೆ ಹೆಣ್ಣಗಳು ಮನೆ ಮುಕ್ಕಾಯ್ತು ||

ಬಡವರ ಬಾಲೆ ಸುಗುಣಿ ಸಂಪನ್ನೆ
ಬಾಳಿಗೆ ಬೆಳಗ ನೀಡಲು ಬಂದರೂ
ದಕ್ಷಿಣೆಗಾಗಿ ಪ್ರದಕ್ಷಿಣೆ ಹಾಕುವ
ವರಗಳನಾಕೆಯು ನೋಡಿ ಒಪ್ಪರು ||

ಡೌಲು ದೌಲತ್ತು ಹುಡುಕುತಲಿಹರು
ಬಾಳಿಗೆ ಬೆಳಕಾಗುವಳ ಹುಡುಕರು
ಕಾಲಕೆ ತಕ್ಕ ಕರಡಿ ಕುಣಿತವ
ಮಾಡುತ ಜನ ಹಾಳಾಗುತಲಿಹರು ||

ಗೃಹ ರಕ್ಷಣೆ ಮಾಡುವ ಸಿರಿಯನ್ನು
ಪರಿಕಿಸಿ ತರುವ ಜನರೆ ಕಡಿಮೆ
ಪತನ ಭಕ್ಷಣೆಯ ಮಾಡುವ ಉರಿಯನ್ನು
ಮನೆಗೆ ತಂದು ಸುಟ್ಟುಕೊಳ್ಳುವರು ||

ದಪ್ಪಿರಲಿ ಕಪ್ಪಿರಲಿ ಹೆಣ್ಣೆಂತೆ ಇರಲಿ
ಸುಪತ್ತಿಗೆ ಮನೆ ಹುಡುಕುವವರು
ಪರದ್ರುವ್ಯವನಪಹರಿಸುವ ಸಂತತಿ
ಹೆಚ್ಚಿಹದು ನಿಜ ಕಳ್ಳರಾಗಿಹರು ||

ರೂಪೈತಿ ಗುಣವೈತಿ ಬಡವರ ಹೆಣ್ಣ
ಲಗ್ನವಾಗದೆ ಸೇರುವದು ಮಣ್ಣ
ಹಣದಿಂ ಹೆಣ್ಣನ್ನಳೆಯುವ ಬುದ್ಧಿ
ಹೋದರೆ ಜನಕೆ ಶಾಂತಿ ಸಮೃದ್ಧಿ || ○

## ಕರಿನಾಡ ನೆಲದಾಗ

ರಾಗ:-ಜೈಜೈವಂತಿ ತಾಲ:-ದಾದರಾ

ಕರಿನಾಡ ನೆಲದಾಗ । ಗದಗಿನ ಮಡಿಲಾಗ
ಸಾಹಿತ್ಯ ಸರಸ್ವತಿಯು ನೆಲಿಸ್ಯಾಳ । ಸಂಗೀತ
ಸಿರಿದೇವಿ ನವಿಲಾಗಿ ಕುಣಿದಾಳ ||

" ಗ " ದಾಗ ಗಾನೈತಿ | " ದ " ದಾಗ ಧರ್ಮೈತಿ
ಗದಗು ಗದ್ದಿಗಿಯಾಗಿ ಮೆರಿತೈತಿ | ಕೃತಪುರಿದು
ಕನ್ನಡದ ಕಸ್ತೂರಿಯಾಗೈತಿ ||

ಗದಗೀನ ಗರತೀಗಿ | ವರಯೋಗಿ ಕೃಪೆ ಮಾಡಿ
ತೋಂಟದ ಸ್ವಾಮಿಗಳು ನೆಲಿಸ್ಯಾರ | ತ್ರಿಕೂಟೇಶ
ವೀರ ನಾರಾಯಣರು ಬೆಳಗ್ಯಾರ ||

ಗದಗಿನ ಗಮ್ಮತ್ತು | ದಾನದ ಕಿಮ್ಮತ್ತು
ಬಸರಿಗಿಡದ ವೀರಪ್ಪ ಮೆರಿಸ್ಯಾನ | ಅದಕಂಡು
ಗಾನಯೋಗಿ ಒಲಿದು ಹರಿಸ್ಯಾನ ||

ಗಟ್ಟ್ಯಾಗಿ ನಿಂತಾಳ | ಶ್ರೇಷ್ಠದಿಂ ಬಾಳ್ತಾಳ
ಚಿತ್ರಕಲೆ ಶ್ರೀಗಂಗೆ ಮಂಗಲದಿ | ಗದಗಿನಾ
ಹೆಸರೆತ್ತಿ ನಾಡಲಿ ಮೆರಿಸ್ಯಾಳ ||

ಕುಮಾರವ್ಯಾಸನ ಕಾವ್ಯ | ಮರಿತೋಂಟದಾರ್ಯಕೃತಿ
ಹುಯಿಲ್ಗೋಳರುದಯವಾಗಲಿ ಗೀತೆ | ಕವಿಯರಸ
ಪುಟ್ಟರಾಜರ ಗದುಗು ಅಮರೈತಿ ||

ಗರುಡ ಕವಿರಾಜರ | ರಂಗಭೂಮಿಯ ಸೇವೆ
ಸಂಗೀತ ನಾಟ್ಯ ಕಲೆಗಳ ಸಂಗಮ | ಕಲಕೇರಿ
ಹಾಡುವನು ಗದಗಿನ ಚಿರ ಕೀರ್ತಿಯ || ○

## ಶಿವನ ಕಂಡೆ

ರಾಗಃ–ತಿಲಂಗ ತಾಲಃ–ದಾದರಾ

ಶಿವನ ಕಂಡೆ | ನಾ | ಶಿವನ ಕಂಡೆ
ಶಿವನ ತೆರದಿ ಲೀಲೆಗೈದ ಗುರುವಿನ ಕಂಡೆ |
ಜಗದ್ಗುರುವಿನ ಕಂಡೆ ||

ಬಾಳೆಹಳ್ಳಿ ಪೀಠದ ಗುರುವಾಗಿ ಬಂದು
ಭಕ್ತರ ಬಾಳೇ ಹೊನ್ನಾಗಿ ಮಾಡಿಕೊಂಡು
ಮೆರೆದು ಮುಕ್ತಿಮಂದಿರದಿ ನೆಲೆಸಿದ ಗಂಗಾಧರನು
ನಿಜ ಶಿವನು । ಪರಶಿವನು । ಭೂ ಶಿವನು
ಆ ಕೈಲಾಸದ ಶಿವನು । ಶ್ರೀ ಗಂಗಾಧರ ಗುರುವರನು
ಒಂದೆ । ಎಂದೆ । ನಾ ॥

ಜಗಕೆ ಸೌಖ್ಯ ನೀಡಲು ಶಿವನು ಕೃಪೆಯ ಗೈದನು
ರಜತಾದ್ರಿಯಲ್ಲಿ ಅಂದು ಗಂಗೆಯನ್ನು ಇಳಿಸಿದನು
ಸೃಷ್ಟಿಯನ್ನುದ್ಧರಿಸಲ್ಕೆ ಗಂಗಾಧರ ಲೀಲೆಯು
ಆ ಲೀಲೆ ನಿಜವಾಗಿ ಹರಿವುದು ಗಂಗಾನದಿಯು
ಅಂತೆ । ಆ ಲೀಲೆಯಂತೆ
ಗಂಗಾಧರ ಶಿವನು ಜನರ ತೃಷೆಯ ಕಳೆಯಲು
ತಾನೆ ಶ್ರಮಿಸಿ ತಾನೆ ಕಡಿದು ತಾನೆ ತೆಗೆದ ಭಾವಿಯೊಳು
ಗಂಗೆಯನ್ನು ಬರಿಸಿದನು ಮುಕ್ತಿಮಂದಿರದೊಳು
ಸೋಮಸಾಗರ ನಾಮದಿ ಗಂಗೆ ಹರಿದು ನೆಲೆಸಿಹಳು

ಆ ಶಿವನು ಗಂಗಾಧರ । ಈ ಶಿವನೂ ಗಂಗಾಧರ
ಆದರೂ ಉಭಯರಲ್ಲಿ ಒಂದಂತರ
ಆ ಶಿವನಿಗು ಈ ಶಿವನಿಗೂ ಮಹದಂತರ

ಅಲ್ಲಿ ಗಂಗೆ ಮಾಯೆಯಾಗಿ ಅವನ ತಲೆಯನೇರಿದಳು
ಇಲ್ಲಿ ಗಂಗೆ ತಾಯಿಯಾಗಿ ಇವನ ಪಾದ ತೊಳೆದಳು
ಎಂಬ ಕುರುಹು ಮುಕ್ತಿಮಂದಿರದ ಗಂಗೆಯಲಿ ಕಂಡೆ
ಗಂಗೆಯಿಂದ ಸೇವೆಗೊಂಡ ಶಿವತನ ಇವನಲಿ ಕಂಡೆ ॥

ಬ್ರಹ್ಮ ವಿಷ್ಣು ದೇವತೆಗಳಿಗೊಲಿದಂದು ಶಿವನು
ಜಗಕೆ ಪ್ರಳಯವಾಗಿರ್ದ ವಿಷಪಾನ ಮಾಡಿದನು

ಅಂದೊಮ್ಮೆ ವಿಷವನುಂಡ ಆ ಶಿವನು
ದಿನ ನಿತ್ಯವೂ ಬೇವಿನ ರಸ ವಿಷವುಂಡನೀ ಶಿವನು
ಅಂದಿನ ಶಿವ ಸಂಸಾರಿಯಾದ ಕಾರಣ
ಗೌರಿಪತಿ ಗಂಗಾಪತಿ ಪಶುಪತಿ ಜಗಪತಿ ಸುರಪತಿ
ಏನೆಲ್ಲ ತಾನಾದರೂ ಗುರುವಾಗಲಿಲ್ಲ । ಆತ
ಈ ಶಿವ ನಿಃಸಂಸಾರಿಯಾದ ಕಾರಣ
ಸಕಲಕೆಲ್ಲಧಿಪತಿ ಶಿವ ಸಂತತಿಗೆ ಗುರುವಾದ
ಗಂಗಾಧರ ಗುರುವರನೆ ಶಿವನಿಗಿಂತ ಮಿಗಿಲೆಂದೆ ॥ ನಾ ॥
ಹರಿ ವಿರಿಂಚಿ ಲಕ್ಷ್ಮಿ ಕುಬೇರರಾದಿ ಸುರರಿಗೆ
ಸರ್ವ ಸಂಪದವಿತ್ತ ಶಿವ ಸಂಪದ್ದೇವತೆ
ನಮಗೆ ಸೌಭಾಗ್ಯವ । ನೀಡ್ದ ಶಿವನೆ ದೈವ
ಎಂದು ಸುರರು ಗೈವ । ರಾಜೋಪಚಾರವ
ಕೊಳುವನೈ ಆಶಿವನು ಪರದೈವ । ಸುರರಿಗದಿದೈವ ಅಂತೆ । ಅದರಂತೆ
ಕನಕ ವಜ್ರ ವೈಢೂರ್ಯ ರಾಜ ಮರ್ಯಾದೆಯಲಿ
ಮೆರೆದ ಗಂಗಾಧರ ಶಿವ ದಸರಾ ದರಬಾರದಲಿ
ರಾಜಾದಿರಾಜರೆಲ್ಲ ಅಳಿದರೂ । ಮೈಸೂರಿನ ದರ್ಬಾರ ಇಲ್ಲವಾದರೂ
ನಡೆಯುತಿದೆ ಬಾಳೆಹಳ್ಳಿ ಪೀಠದ ದರಬಾರವು
ಎಂದೆಂದು ಗುರುತತ್ವ ಮೆರೆವ ಅವರ ಕುರುಹಿದು
ನಗುರೋರಧಿಕವೆಂದು ಶೃತಿ ಹಾಡಿದೆ
ಶಿವ ಸರ್ವೋತ್ತಮನೆಂದು ಶಾಸ್ತ್ರ ಹೊಗಳಿದೆ
ಅದನೆ ಹೊಗಳುವೆ । ಅದನೆ ಹಾಡುವೆ । ॥ನಾ॥
ಸರ್ವರಿಗೆ ಸರ್ವ ಸಂಪದವಿತ್ತ ಪರಶಿವನು
ಸಂಪತ್ತಿನ ಆಳಿಕೆಯಲ್ಲಿ ಮೆರೆಯದಾದನು
ಆಳ್ತನದಲಿ ಆಳಾಗು ಎಂಬ ಪಾಠವನು
ಭಿಕ್ಷಾಟನ ಲೀಲೆಯಿಂದ ತೋರಿಸನು ಶಿವನು । ಅಂತೆ । ಅದರಂತೆ
ಗಂಗಾಧರ ಶಿವನು ಜಗದ್ಗುರುವಾದರೂ
ಜಗದ ಸಂಪತ್ತಿನಲ್ಲಿ ತಾ ಮೆರೆದರೂ

ಮಣ್ಣ "ಮಗ"ಯು ಹಿಡಿದಿದ್ದನು ಅದು ಭಿಕ್ಷಾಟನ ಲೀಲೆ
ತಟ್ಟನುಟ್ಟುತೊಟ್ಟದ್ದನು, ಅದು ವೈರಾಗ್ಯದ ಲೀಲೆ
ಅನ್ನ ತೊರೆದು ವಿಷ ಕುಡಿದನು , ಅದು ವಿಷ ಪಾನದ ಲೀಲೆ
ಆ ಕೈಲಾಸದ ಶಿವನು ವೈರಾಗ್ಯದ ಲೀಲೆಯೊಳು
ಬೂದಿ ಬಡಿದುಕೊಂಡು ತಾ ಸ್ಮಶಾನ ವಾಸಿಯಾದನು

ಈ ಕೈಲಾಸದ ಶಿವನು ಮುಕ್ತಿಪಡೆವ ಲೀಲೆಯೊಳು
ಭಸ್ಮಯೋಗ ಸಮಾಧಿಯಲಿ ಕುಳಿತು ಮರೆಯಾದನು

ಆತನೂ ಮೌನ ಈತನೂ ಮೌನ
ಆತನೂ ಲಿಂಗ ಈತನೂ ಲಿಂಗ
ಆವನು ಇವನು ಒಂದೆ ಮಹಾಲಿಂಗ
ಒಂದೆ ಶಿವಲಿಂಗ ಒಂದೇ ಶಿವ

ಎಲ್ಲಿಹನು ಅಲ್ಲಿಹನು ಶಿವನೆಂದು ನೀನು
ಎಲ್ಲೆಲ್ಲೊ ಬಾಗದೆ ಗಂಗಾಧರ ಶಿವನಿಗೆ ಬಾಗು
ಎಂದು ಹೇಳುವೆ ಎಂದು ಹಾಡುವೆ ||ನಾ||

## ಎಲ್ಲಿದ್ದಿಯೋ ದೇವರೆ

ರಾಗ: ಮಿಶ್ರಪೀಲೂ

ತಾಲ: ದಾದರಾ

ಎಲ್ಲಿದ್ದಿಯೋ ದೇವರೆ । ನೀ । ಹೇಗಿದ್ದಿಯೋ ದೇವರೆ
ಏನಂತಿದೋ ದೇವರೆ । ಬರದೆ । ಎಲ್ಲಿ ಕುಂತೀದ್ಯೋ ದೇವರೆ ||

ನಿನ್ನ ಆನಂದಕೆ ಜಗವ ನೀ ಸೃಷ್ಟಿಸಿದೆ
ಜಗವು ಅಂದವಾಗಲ್ಕೆ ಜೀವಂಗಳ ಹುಟ್ಟಿಸಿದೆ
ಜೀವ ಜೀವನಕೆ ಗಾಳಿ ಮಳೆ ಬೆಳೆ ಕರುಣಿಸಿದೆ
ಮಣ್ಣಿನಲ್ಲಿ ಚಿನ್ನವಿಟ್ಟೆ ರನ್ನ ಮಾಣಿಕವಿಟ್ಟೆ
ಎಲ್ಲ ಕೊಟ್ಟ ಮಹಾದಾನಿ ಮಹಾದೇವ ನೀನೆ

ಎಂದು ಅಡ್ಡ ಉದ್ದ ಬಿದ್ದು ಬಾಗಿದರಂತೆ
ಮುಗ್ಧರಾದ ನಮ್ಮ ಹಿಂದಿನ ಹಿರಿಯರಂತೆ
ಅವರು ಕರೆದಾಗ ಓ ಎಂದು ಬಂದೆಯಂತೆ
ನಾವು ಈಗ ಕರೆದರೆ ಬರದೆ ಏಕೆ ಕುಂತೆ ? ॥

ಭಕ್ತರ ಭಕ್ತಿಯು ಎಡೆಗೆ ಹುಚ್ಚಾದೆಯಂತೆ
ಭಕ್ತರ ಮನೆಯಾಳಾಗಿ ಉಣ್ಣುತ್ತ ಕುಳಿತೆಯಂತೆ
ಕೈಲಾಸ ವೈಕುಂಠ ಸುರಲೋಕ ಮರತೆಯಂತೆ
ಭೂಲೋಕದಲ್ಲಿ ಖಾಯಂ ಆಗಿ ನಿಂತೆಯಂತೆ
ಎಂದೊ ಒಮ್ಮೆ ಬಂದು ಉಂಡು ಹೋದರೆ ಚಂದಲ್ಲವೆ
ಎಲ್ಲಾ ಬಿಟ್ಟು ಇಲ್ಲುಳಿದರೆ ಜನ ಸುಮ್ಮನಿರುವರೆ
ಬೋಲಾ ಬೋಳ್ಯಾ ವೆಂಕ್ಯಾ ತಿಮ್ಮಾ ಹೆಸರಿಟ್ಟರಂತೆ
ಚೇಷ್ಟೆ ಮಾಡಿ ಅವರು ಕರೆಯೆ ಕೇಳಿ ನೊಂದೆಯಂತೆ
ಕೆಟ್ಟ ಜನರ ಸಹವಾಸ ಸಾಕು ಎಂದೆಯಂತೆ
ಬೇಸರಾಗಿ ಮರೆಯಾಗಿ ದೂರ ಹೋದೆಯಂತೆ ॥

ಏನು ಕೊಟ್ಟರೇನು ಎಷ್ಟು ಪೊರೆದರೇನು
ಕೃತಘ್ನರೆಂದು ತೀರ್ಮಾನಿಸಿ ಕೋಪಗೊಂಡೆಯಂತೆ
ಆ ಕಾರಣ ಮಳೆ ಬೆಳೆ ಸಮೃದ್ಧಿ ಇಲ್ಲವಂತೆ
ಆಗ ನಿನ್ನ ನೆನಪಾಗಿ ಹುಡುಕಾಡಿದರಂತೆ
ಇಲ್ಲೆ ಇದ್ದಿ ಎಲ್ಲಿ ಹೋದಿ ಬಾರೋ ನನ್ನಪ್ಪನೆ
ಎಂದು ಅತ್ತು ಅತ್ತು ಬೇಸತ್ತು ಸತ್ತರಂತೆ
ಹಿರಿಯರಂತೆ ಹುಚ್ಚನಾಗಲಾರೆನೆಂದ ಮುಂದಿನವ
ಕಾಣದ ದೇವರನು ಕಟೆದು ಗುಡಿ ಕಟ್ಟಿಸಿ ಇಟ್ಟನಿವ
ನಿನ್ನ ಹೆಸರಿನಲ್ಲಿ ಪೂಜಾರಿಕೋಣ ಮೆರೆಯುತಿದೆ
ಇದನು ನೋಡಿ ಏನಂತಿದೆಲೆ ದೇವರೆ ? ॥

ನೀನು ಕಾಣದಾದಾಗ ನಿರಾಕಾರ ಎಂದವರೆ
ತಮ್ಮಂತೆ ನಿನ್ನ ರೂಪ ಕಲ್ಪಿಸಿ ಕಟೆದಿಟ್ಟರು

ದಿಗಂಬರನು ನೀನೆಂದು ಹೇಳಿ ಹಾಡುವ ಜನರೆ
ಪೀತಾಂಬರ ಪ್ರಿಯನೆಂದು ಉಡಿಸಿ ತಾವೆ ತೊಡುವರು
ನಿತ್ಯತೃಪ್ತ ಭಗವಂತ ನೀನೆಂದು ಹೊಗಳುವ ಜನರೆ
ರುಚಿ ರುಚಿ ಎಡೆ ನಿನಗೆ ಮಾಡಿ ಉಂಡು ತಣಿವರು
ನಿರಂಜನ ನಮ್ಮಯ ದೇವರೆಂದು ಭಜಿಸುವ ಜನರೆ
ಗೌರೀಪತಿ ಲಕ್ಷ್ಮೀಪತಿ ವಾಣೀಪತಿ ಎನ್ನುವರು
ತಮ್ಮ ಸೌಖ್ಯಕಾಗಿ ನಿನ್ನ ಬಳಸಿಕೊಂಡು ಬಾಳುವರು
ಇದನು ಕಂಡು ಏನೆನ್ನುವಿ ಹೇಳು ಬಾರೋ ದೇವರೆ ॥

ಕರುವಿಗೆಂದೆ ತೊರೆಯ ಬಿಟ್ಟ ಹಸು ಹಾಲನು ಹಿಂಡುವರು
ನಿನಗೆ ಅಭಿಷೇಕೆಂದು ತಂದು ತಾವೆ ಕುಡಿಯುವರು
ಭ್ರಮರುಂಡು ಜೇನ ಸೃಜಿಸಲೆಂದು ಪುಷ್ಪ ಅರಳುವದು
ಅದನ್ನು ಕೊಯ್ದು ನಿನ್ನ ಹೆಸರಿನಲ್ಲಿ ತಾವೆ ಮುಡಿವರು
ದೀಪಹಚ್ಚಿ ಬೆಳಗುವರು ನಿನಗೆ ಕತ್ತಲೆಯೇನು
ಧೂಪ ಗಂಧ ಇರಿಸುವರು ದುರ್ಗಂಧಿಯೆ ನೀನು
ಅಭಿಷೇಕ ಪ್ರಿಯ ಶಿವ ಗಂಗಾಧರನೆನ್ನುತ್ತೊಮ್ಮೆ
ಶಿರಕೆ ಗಂಗೆ ಇರಿಸಿದರು ನಿನ್ನ ತಲೆಗೆ ಜ್ವರವೇನು
ಜಲದಿ ಶಯನ ಹರಿಯೆಂದು ಹೊಗಳಿದರಿನ್ನೊಮ್ಮೆ
ಸಮುದ್ರದಲ್ಲಿ ಕಪ್ಪೆ ಮೀನಿನಂತೆ ನಿನ್ನ ಇರಿಸಿದರೆ
ಈ ಜನರ ಕಂಡು ದೇವ ನೀನೇನಂತೀಯೋ ? ॥

ಕಾಲ ಕೂಟ ಹೊಗೆಯಿದೆಂದು ಗಾಂಜಾ ಸೇದುತ್ತಿಹರು
ಸೇದಿ ಗುಡಿಯ ತುಂಬಿಸಿ ಅಹಂಬ್ರಹ್ಮಾಸ್ಮಿ ಎನುವರು
ಸುರರು ಕುಡಿದ ಅಮೃತವಿದು ಸುರೆ ಎಂದ್ಹೆಸರಾಗಿಹುದು
ಎನುತ ಕುಡಿದು ತೀರ್ಥವೆಂದು ಜನಕೆ ಕುಡಿಸುವರು
ಹಿರಣ್ಯಕಶ್ಯಪನ ಕೊಂದ ಕಣ್ಣಪ್ಪನ ಮಾಂಸ ತಿಂದ
ಎಂದು ಕೋಣ ಕುರಿಗಳನ್ನು ಕಡಿದು ಕಂಡ ತಿನುವರು
ಹರಗಿಬ್ಬರು ಕೃಷ್ಣಗೆ ಹದಿನಾರ್ಸಾವಿರ ಹೆಂಡರು

ವೇಶ್ಯಾವ್ಯಾಮೋಹಿ ನೀನೆಂದು ಸ್ತ್ರೀಲೋಲರಾಗಿಹರಿವರು
ನಾಟ್ಯಶೀಲ ನಾಟ್ಯಲೋಲ ನೀನೆಂದು ಗುಡಿಯೊಳು
ಕಲೆ ಬಾರದ ಸ್ತ್ರೀಯರೊಡನೆ ಕುಣಿದು ತಣಿವರು
ಇದನು ನೋಡುತ್ತ ನೀ ಹೇಗಿದ್ದಿಯೋ ದೇವರೆ ॥

ಅಲ್ಲಿ ಇಲ್ಲಿ ಇಲ್ಲಿ ಅಲ್ಲಿ ದೇವನಿರುವನೆಂಬ ದಾಳಿ
ಜಗದ ತುಂಬ ನೋಡು ಗುಡಿ ಮಂದಿರಗಳ ಹಾವಳಿ
ದೇವ ನಿನ್ನ ಹೆಸರಿನಲಿ ನಡೆದೈತೊ ವ್ಯಾಪಾರ
ಚುಟ್ಟಾ ಕಟ್ಟಿನ ಮೇಲೆ ದೇವ ಚಿತ್ರ ಬರಿಸ್ಯಾರ
ಮಹೇಶ ವಿಷ್ಣು ಬೀಡಿ ಶ್ರೀ ಗಣೇಶ ಬೀಡಿ ಮಾಡ್ಯಾರ
ಕಾಮನ ಸುಟ್ಟಂಥೆ ನಿನ್ನ ಬೀಡಿಯಲ್ಲಿ ಸುಡತಾರ
ಸದಾ ಎಚ್ಚರಿರುವ ದೇವ ನಿನ್ನ ಹೆಸರಿನಲ್ಲಿ ಈಗ
ಬೀರ ಬ್ರ್ಯಾಂಡಿ ಸೇಂದಿ ಡೀಪೋ ಅಂಗಡಿ ಇಟ್ಟಾರ
ಎಲ್ಲದಕ್ಕೂ ನಿನ್ನ ಹೆಸರು ಜನರ ಬಸಿರು ನಡದೈತಿ
ಇಷ್ಟಾದರೂ ಬರಲಾರದೆ ಏಕೆ ಸುಮ್ಮನೆ ಕುಳಿತೆ ? ॥

ದೇವರೆ ನೀ ಗಂಡೆಂದು ಅಲ್ಲಲ್ಲ ನೀ ಹೆಣ್ಣೆಂದು
ಗಂಡು ಹೌದು ಹೆಣ್ಣು ಹೌದು ಅರ್ಧನಾರಿ ನೀನೆಂದು
ಹರಿ ಎಂದು ಹರ ಎಂದು ಬ್ರಹ್ಮ ಅಲ್ಲಾ ನೀನೆಂದು
ಗೌರಿ ಎಂದು ಲಕ್ಷ್ಮಿ ಎಂದು ವಾಣಿ ದುರ್ಗಾದೇವೆಂದು
ನಾಮ ರಹಿತ ದೇವ ನಿನಗೆ ಹಲವು ಹೆಸರಿಟ್ಟರು
ಕಲ್ಲು ಮಣ್ಣು ಲೋಹ ಗಿಡ ಮರ ಜಲಗಳು ನೀನೆಂದು
ಹಲವು ತರನೆ ನಿನ್ನ ಕರೆದು ಗೇಲಿ ಮಾಡುತಿರುವರು
ಆರು ನೀನು ಎಲ್ಲ ನೀನು ಎಂದರಿಯದ ಈ ಜನರು
ಎಲ್ಲದಕ್ಕೂ ಬಳಸಿ ನಿನ್ನ ಹೆಸರ ಕೆಡಿಸುತಿರುವರು
ಹೇಗೆ ಬೇಕೋ ಹಾಗೆ ನಿನ್ನ ಹರಿದು ಹಂಚುತಿರುವರು
ಇಷ್ಟಾದರೂ ನೀನು ಸುಮ್ಮನೇಕಿದ್ದಿಯೋ ದೇವರೆ ? ॥

ಚರ್ಮಾಂಬರಧಾರಿ ಶಿವನ ಹೆಸರಲಿ ಕ್ಲಾಥೆ ಮರ್ಚಂಟು
ಬರಿ ಮೈಯ ಕೃಷ್ಣನ ಹೆಸರಲಿ ಶರ್ಟ ಕೋಟ ರೆಡಿಮೆಡ್‌ಸ್ಟೋರು
ಬೆತ್ತಲೆ ತಿರುಗಿದ ಅಕ್ಕನ ಹೆಸರಲಿ ಶಾರಿ ಸೆಂಟರ್ರು
ಅಹಿಂಸಾವಾದಿ ಬುದ್ಧ ಬಸವರ ಹೆಸರಲಿ ಮಾಂಸದ ಹೋಟಲ್ಲು
ಬ್ರಹ್ಮಚಾರಿ ವಿವೇಕಾನಂದ ಹೆಸರಲಿ ಶ್ರಿಂಗಾರ್ ಸ್ಟೋರ್ಸು
ಏನೂ ತಿನ್ನದ ರಾಘವೇಂದ್ರು ಹೆಸರಲಿ ಲಂಚಹೋಮುಗಳು
ಲಕ್ಷ್ಮಿ ಸರಸ್ವತಿ ಹೆಸರಲಿ ಹೇರ ಕಟಿಂಗ ಸಲೂನಗಳು
ಪುಣ್ಯವೇನೋ ದೇವನಿನಗೆ ಕಟಿಂಗ ಮಾಡ ಹಚ್ಚಿಲ್ಲ
ಹೀಗೆ ಸುಮ್ನೆ ನೋಡ್ತಿರು ನಿನ್ನ ಬಾಯಾಗ ಚುಟ್ಟಾ ಇಡ್ತಾರ
ಕೈಯ್ಯಾಗ ಕಪ್ಪುಬಸಿ ಕೊಟ್ಟು ಸಪ್ಲಾಯ ಮಾಡಾಕ ಹಚ್ಚತಾರ
ಇಷ್ಟಾದರೂ ಈ ಜನಕೆ ಬುದ್ಧಿಕಲಿಸಲ್ಕೆ
ಬರಬಾರದೇನೋ ದೇವರೆ ||

## ಹಬ್ಬ ಮಾಡಿರೋ

ರಾಗ: ಬಿಲಾವಲ್ — ತಾಲ: ದಾದರಾ

ಹಬ್ಬ ಮಾಡಿರೋ । ನಿಜ ಹಬ್ಬ ಮಾಡಿರೋ
ಹರ ಧರ್ಮದ ಜೀವಾಳ ತಾನಾಗಿ ಮೆರೆಬ
ಹಾನಗಲ್ಲ ಯೋಗಿಯ ಹಬ್ಬ ಮಾಡಿರೋ ||

ಮನಸಿನುತ್ಸಾಹವೆ ಉತ್ಸವವಾಯ್ತು
ಹೃದಯ ಹರವಾದುದೆ ಹಬ್ಬ ಹುಣ್ಣಿವೆಯಾಯ್ತು
ಜೀವನೋದ್ಧಾರದ ಮಾರ್ಗವನು ಕಂಡು
ಲಿಂಗ ಗುರು ಜಂಗಮರ ಜೀವನ ನೆನೆದು
ಆಚರಿಸುವ ತಿಥಿ ದಿನಗಳೆ ಹಬ್ಬವಾದವು
ಅಂಥ ಹಬ್ಬದಲ್ಲಿ ಮಿಗಿಲು ಗುರುವಿನ ಹಬ್ಬ
ಧರ್ಮ ಪುರುಷ ಹಾನಗಲ್ಲ ಸ್ವಾಮಿಯ ಹಬ್ಬ ||

ಗಾಳಿ ಬಿಟ್ಟಾಗ ತೂರಿಕೊ ಎಂಬ ಗಾದೆಯು ಕೇಳು
ಗುರುಲಿಂಗ ಜಂಗಮದ ಶಿವಗಾಳಿ
ಹಾನಗಲ್ಲ ಪೀಠದಲ್ಲಿ ಉದ್ಭವಿಸಿ
ಶಿವಯೋಗಮಂದಿರದಿ ಕೇಂದ್ರೀಕರಿಸಿ
ಜಗತುಂಬ ವ್ಯಾಪಿಸಿ ಬೀಸಿ ಬೀಸತ್ತೈತಿ
ಗುರುಕುಮಾರ ಚರತ್ವದ ಈ ಗಾಳಿಯಲಿ
ಭವದ ಮದವನ್ನು ನೀವು ತೂರಿಕೊಳ್ಳಿ
ಸದಾಶಿವ ನಿರಂಜನದ ರಾಶಿಯು ಮಾಡಿರಿ
ಶೂನ್ಯ ಸಂಪದ ಕಾಳನೆ ಒಕ್ಕಿರಿ
ಅನುಭಾವದ ಪಾಕವ ಮಾಡಿ ಉಣ್ಣಿರಿ
ಗುರು ಲಿಂಗ ಜಂಗಮದ ಹಬ್ಬ ಮಾಡಿರಿ
ಇದೆ ಸದಾಶಿವ ಸುಕುಮಾರನ ಹಬ್ಬ ಕೇಳಿರಿ ||

ಹೈನವಿದ್ದಾಗ ಹಬ್ಬ ಮಾಡು
ಎಂಬುನ್ನೊಂದು ಗಾದೆ ಮಾತು
ಭಗವಂತ ಸದಾಶಿವನ ಸಂಕಲ್ಪದಲ್ಲಿ
ಜಂಗಮ ಕಳೆ ಜನಿಸಿತಾಕಳವಾಗಿ ಇಲ್ಲಿ
ಭೂರಂಜನ ಕಲೆಯು ಬೆಲೆಯನುಂಡು
ಶಿವ ನಿರಂಜನ ತೊರೆಯು ಬಿಟ್ಟು ತಾನು
ಕರೆವರಾರೆಂದು ಓಡಾಡುತ್ತಿತ್ತು ಭೂಮಿಯಲಿ
ಯಾರೂ ಬರದಾಗ ಗುರುಕುಮಾರಸ್ವಾಮಿ ನೋಡಿ
ಹಾಲ ಕರೆವ ಗುರು ಗೌಳಿಗಿತ್ತಿ ತಾನಾಗಿ
ಜಂಗಮ ಕಳೆ ಕಾಮಧೇನು ಆಕಳವ ಹಿಂಡಿ
ಶಿವಯೋಗ ಮಂದಿರದೆ ಹೈನ ಮಾಡಿ
ಶಿವಯೋಗದ ಹಾಲು ಬೆಣ್ಣೆ ಭಕ್ತರಿಗುಣಿಸಿ
ಶಿವ ಧರ್ಮದ ಹಬ್ಬ ಮಾಡಿದ ಸದಾಶಿವ
ಸುಕುಮಾರನ ಹಬ್ಬ ಮಾಡಿರೋ ||

# ತಿರುಪತಿ ಗಿರೀಶ

ರಾಗ: ಖಮಾಜ ತಾಲ: ಖವಾಲಿ

ತಿರುಪತಿ ಗಿರೀಶ ಪರಮೇಶ
ನಿರುತ ಭಕ್ತರ ಪೊರೆವ ಲಕ್ಷ್ಮೀಶ ||

ಮರ್ತ್ಯದೆ ಮನುಜರ ಭಕ್ತಿಯ ನೋಡುತ್ತ ಮೆರೆಸುವ ಉತ್ತುಂಗ ಗಿರಿವಾಸ
ನಿತ್ಯ ನಿಷ್ಠೆಯಿಂದೆ ನೆನೆದವರ ಕಂಡು ಸತ್ಕೀರ್ತಿಯನೀವ ತಿರುಪತೀಶ
ಹೆತ್ತ ತಂದೆತಾಯಿ ಮಿತ್ರ ಬಂಧು ಬಳಗ ನೀನೆಂದು ನಂಬಿದರೆ ಸಾಕು
ಹತ್ತಿರವೆ ಹುಡುಕುತ್ತ ತಾ ಬಂದು ಕಾಪಾಡುವ ವೆಂಕಟಾದ್ರಿವಾಸ ||

ವೆಂಕಟಾದ್ರೀಶ ಶಂಕೆಯ ಕಳೆಯೆಂದು ಸಂಗೀತಪಾಡಿದರೆ ಕುಣಿವ ಸ್ವರೇಶ
ಶಂಖುಧಾರಿಯು ನೀನು ಚಕ್ರಧಾರಿಯು ನೀನು ಶಂಕರಸದಾಶಿವ
ಬ್ರಹ್ಮನು ನೀನು
ಓಂಕಾರ ಪೂರ್ಣನೀನೆಂದು ಕಿಂಕರನಾಗಿ ಅಭೇದದಿ ಹಾಡಿದರೆ ಅವನು
ವಿಷ್ಣು ಶಿವನೆ ಬ್ರಹ್ಮಎಲ್ಲವೂ ತಾನಾಗಿ ಅಕಳಂಕ ಪದ ಕೊಡುವ ಜಗದೀಶ ||

ತಿರುಪತಿಗಿರಿವಾಸ ಸರ್ವೇಶ ಸಿರಿಗೀಶನೆಂದು ನಿರುತ ಧ್ಯಾನಿಸಿದರೆ ಸಾಕು
ಸಿರಿ ಸೌಖ್ಯ ಶುಭಾದಿ ಮಂಗಲಂಗಳನ್ನಿತ್ತು ಕರುಣದಿ ಕಾಯುವ ಹರಿಹರೇಶ
ಚಿರಶಾಂತಿ ಚಿರಕೀರ್ತಿ ಚಿರಭಾಗ್ಯವೀಯುತೆ ಧರೆಯ ಭಕ್ತರ
ಕಾಯ್ವ ಅಮರೇಶ
ಆರೋಗ್ಯ ಆಯುಷ್ಯ ಐಶ್ವರ್ಯಗಳನ್ನು ತನ್ನ ಭಕ್ತರಿಗಿತ್ತು ಪೊರೆವ ವೆಂಕಟೇಶ||

# ಹೆಣ್ಣು ಕಣ್ಣಾಗಬೇಕು

ರಾಗ: ಪೀಲೂ ತಾಲ: ದಾದರಾ

ಹೆಣ್ಣು ಕಣ್ಣಾಗಬೇಕು | ಒಳ್ಳೆ ಹೆಸರು ತರಬೇಕು ತವರಿಗೆ
ಹೆಣ್ಣು ಲೋಕದ ಕಣ್ಣು ಎಂಬೊ ಗಾದೆಗೆ
ರತ್ನ ಪ್ರಾಯಳಾಗಬೇಕು ಸ್ತ್ರೀ ಬಾಳ ಭುವಿಗೆ ||

ಅಷ್ಟದಾರಿ ತುಳಿಯುವಲ್ಲಿ ಅಬಲೆಯಾಗಬೇಕು
ದೊಡ್ಡವರ ಪಥೆ ತುಳಿವಲ್ಲಿ ಸಬಲೆಯಾಗಬೇಕು
ಹಡೆದವರ ಮನವಲಿ ಹಾಲಾಗಿ ಹರಿಬೇಕು
ಪಡೆದವರ ಬಾಳಿನಲಿ ಬೆಳಕಾಗಿ ಬೆರಿಬೇಕು ||

ಓದು ಎಷ್ಟು ಕಲಿತರೂ ಹದಿಬದಿಯಲ್ಲಿರಬೇಕು
ವೇದ ಶಾಸ್ತ್ರ ನುಡಿಯಂತೆ ಬಾಳ ತಿದ್ದಬೇಕು
ಆದರ್ಶ ಸತಿ ಸಾವಿತ್ರಿ ಮಲ್ಲಮ್ಮರಂತಿರಬೇಕು
ಹಾಡಿ ಹರಸಬೇಕು ಜನ ಅಂತಾಗಿ ಬಾಳಬೇಕು ||

ಶಿಕ್ಷಣ ರಂಗದಲಿ ಸರಸ್ವತಿಯಾಗಿ ಕಲಿಬೇಕು
ಕೊಟ್ಟ ಪತಿ ಮನೆಯಲ್ಲಿ ಮಹಲಕ್ಷ್ಮಿಯಾಗಿ ದುಡಿಬೇಕು
ಅನ್ನಪೂರ್ಣೆಯಂತೆಲ್ಲರ ಉಣಿಸಿ ತಣಿಸಬೇಕು
ಸಂಸಾರದಿ ಸದ್ಗತಿಯ ಪಡೆದು ತಾಯಿಯಾಗಿರಬೇಕು || ○

## ಎಷ್ಟು ಬದಲಾಯ್ತು ದೇಶ

ರಾಗ: ಭೈರವಿ ತಾಲ: ಖವಾಲಿ

ಎಷ್ಟು ಬದಲಾಯ್ತು ದೇಶ | ಹೇಳಾಕ ಬರದಂಥಾ ದೇಶ
ಅಂದಿನ ಜಗದ ಇಂದಿನ ಜಗದ ಜನರ ರೀತಿ ನೀತಿ
ಎಲ್ಲಾ ಅದಲು ಬದಲು | ಎಲ್ಲಾ ಕೆಳಗು ಮೇಲು ||

ದೇವ ದೇವತಾ ಶಕ್ತಿ | ಅದು ಆದಿಶಕ್ತಿ ಪರಾಶಕ್ತಿ
ಎಂದು ನಂಬಿದ್ದರಂದಿನ ಜನರು | | ಭಕ್ತಿಯಿಂದ ಬಾಗಿದರು ಅವರು
ಕಂಬಳಿ ಬೀಸಿ ಕರೆದ ತಕ್ಷಣ ಜಡಿ ಮಳಿ ಬರತಿತ್ತಂತೆ
ಜಂಗಮ ತೃಪ್ತಿ ಮಾಡಿದಾಗ ಭಾರಿ ಬೆಳೆ ಬೆಳಿತಿದ್ರಂತೆ
ದೇವರೆ ಇಲ್ಲ ಕಲೆಂದು | ಕಲ್ಲು ಕಟ್ಟಿಗೆನ್ನುವರು
ನಾಸ್ತಿಕರಾಗಿಹರೀ ಜನರು | ಮಳೆ ಬೆಳೆ ಕಾಣದೆ ಕುಳಿತಿಹರು
ಅಂತೆ ಕ್ಷುಲ್ಲಕ ಜನರಿಗೆ ದೇವ ಬೇಕೆಂದೆ ಕಲ್ಲಾಗಿಹನಂತೆ
ಹೊತ್ತಿಗೆ ಸರಿಯಾಗಿ ಮಳೆ ಬೆಳೆ ಕೊಡದೆ ಮುದ್ದಾಂ ಕಾಡಿಸುತಿಹನಂತೆ
ಅಂದಿನ ಜನರ ಇಂದಿನ ಜನರ ಭಕ್ತಿ ಯುಕ್ತಿ ರೀತಿ | ಎಲ್ಲಾ ||

ಅಂದಿನ ಬೆಳಕು ಮೇಲ್ಮುಖವಿತ್ತು । ಕತ್ತಲು ದೀಪದ ಕೆಳಗಿತ್ತು
ಪ್ರಗತಿಯ ಜ್ಯೋತಿ ಅಂತಿತ್ತು । ಚಿಮಣಿಯು ದೀಪ ಹಾಕಿತ್ತು
ಇಂದಿನ ವಿದ್ಯುತ್ತ್ ಬಲ್ಬು ಜೋತಾಡತೈತಿ ತೊದಲುಬಾವಲಿಯಂತೆ
ಬೆಳಕು ಕೆಳಗೆ ಕತ್ತಲು ಮೇಲೆ ತಲೆ ಕೆಳಗೆ ಕಾಲುಮೇಲಂತೆ
ಅಂದಿನ ದೀಪದ ಕಾಂತಿ ಪ್ರಶಾಂತಿ । ಇಂದಿನ ದೀಪಕೆ ಇಲ್ಲ ಆ ಶಾಂತಿ
ಮುಟ್ಟುವಂತಿಲ್ಲ ಡೇಂಜರು । ಫೋರ ಹಂಡ್ರೆಡ್ ಶಿಕ್ಷ್ಟಿ ಪಾವರು
ಅಶಾಂತಿಯ ಬೆಳಕು ವಿದ್ಯುತ್ತ್‌ಶಾಕು ವಿಶ್ವಜೀವನಕೆ ಆಪತ್ತು
ಒಂದಿಲ್ಲೊಮ್ಮೆ ನಾಡ ದೇಶವ ಸುಡತೈತೊ ಈ ವಿದ್ಯುತ್ತು
ಅಂದಿನ ಜನರ ಇಂದಿನ ಜನರ ಜ್ಯೋತಿ ರೀತಿ ನೀತಿ ।ಎಲ್ಲಾ॥

ಅಂದಿನ ರಾಜ ಗುರುಭಕ್ತನಾಗಿ । ಧರ್ಮದಿಂದ ರಾಜ್ಯವಾಳಿದನು
ರಾಜ ಪ್ರತ್ಯಕ್ಷ ದೇವರೆ ಆಗಿ । ಸೌಖ್ಯ ಸಾಮ್ರಾಜ್ಯ ಕಟ್ಟಿದ್ದನು
ಗುರು ಅಪ್ಪಣೆಯಲಿ ರಾಜ್ಯನನಾಳಿ ಸುಖ ಸಮೃದ್ಧಿಯ ಪಡೆದಿದ್ದ
ಮುತ್ತು ರತ್ನಗಳ ರಾಶಿಯ ಮೇಲೆ ಮೆರೆವ ಶ್ರೀಮಂತನಾಗಿದ್ದ
ಇಂದಿನ ಪ್ರಜಾರಾಜ್ಯದ ರಾಜ । ಗುರುವಿಗೆ ಬೆಲೆ ಕೊಟ್ಟಿಲ್ಲೀ ಕಾಜಾ
ಗುರುವೂ ಒಬ್ಬ ಪ್ರಜೆಅಂತಾನ । ನೋಟಿನ ರಾಜ ಆಯ್ಯಾಮುಸ್ವಾರಿ
ಓಟಿನ ರಾಜ

ಮಠಮಂದಿರಗಳ ಸಾಷ್ಟ್ರೀಕರಣ ಮಾಡೇಬಿಡ್ತಿನಂತಾನ
ನೌಕರರಂತೆ ಮಠದ ಗುರುಗಳ ಟ್ರಾನ್ಸಫರ್ ಮಾಡ್ಬೇಕಂತಾನ
ಅಂದಿನ ರಾಜರ ಇಂದಿನ ರಾರಜ ಗುರುಭಕ್ತಿ ನೀತಿ ।ಎಲ್ಲಾ॥

ಉತ್ತುವಬಿತ್ತುವ ನೇಗಿಲಹೊಡಿವ । ಎತ್ತು ಬಸವಣ್ಣದೇವರೆನುವ
ಎತ್ತಿನ ತಾಯಿ ಶ್ರೀಗೋಮಾತಾ । ಎಂದು ರೈತ [illegible] ಪೂಜಿಸುತ
ಎತ್ತಾಕಳನು ಭಕ್ತಿಯಿಂದ ಸಾಕಿ ಶಗಣಿ ಗೊಬ್ರ ಹೊಲಕ್ಹಾಕತಿದ್ದ
ರೋಗರುಜಿ ಕ್ರಿಮಿ ಕೀಟಗಳರದೆ ಭರಪೂರ ರಾಶಿ ಮಾಡತಿದ್ದ
ಈಗರೈತ ಎತ್ತು ಆಕಳನು । ಕಟುಕರಿಗಿತ್ತು ಕೊಯ್ಯಿಸುವನು
ಹೊಸ ಹೊಸ ಎಂತ್ರುಗಳ ಬಳಸುತ್ತ । ಯಾಂತ್ರಿಕನಾಗಿಹನೀ ರೈತ
ಇವನ ಕರ್ಮಫವೇನೋ ಬೆಳೆಗಳಿಗನಂತ ರೋಗ ಕ್ರಿಮಿಕೀಟಗಳು

ಎಷ್ಟೆಷ್ಟೊ ಔಷಧ ಹೊಡಿತಾನಾದರು ರಾಶಿ ಬಹಳಿಲ್ಲ ಬಲುಗೋಳು
ಅಂದಿನ ಗೈತನ ಇಂದಿನ ರೈತನ ಒಕ್ಕಲುತನದ ರೀತಿ ।ಎಲ್ಲಾ॥

ಅಂದಿನ ಗುರುಮನೆ ಮಕ್ಕಳು । ಜೋಳ್ತಲೆ ಲಂಗೋಟಧಾರಿಗಳು
ಬ್ರಹ್ಮವಿಷ್ಣು ಮಹೇಶ ಗುರು । ಸಾಕ್ಷಾತ್ ಪರಶಿವ ಎನುತಿದ್ದರು
ಭಸ್ಮ ಗಂಧ ತಿಲಕಾದಿ ಧರಿಸಿ ವೈದಿಕ ವಟು ಮೆರೆದಾಡಿದರು
ಭಾರತ ದೇಶದ ಧರ್ಮಸಂಕ್ರಾಂತಿ ವಿಶ್ವದಲಿ ಅಂದು ನೆರೆಸಿದರು
ಕಲಿವುದು ತಪ್ಪೊ ಕಲಿಸುವದು ತಪ್ಪೊ । ಹೈಸ್ಕೂಲ ಕಾಲೇಜ
ಮಾಡೂದು ತಪ್ಪೊ

ಎನುವಂತಾಗಿದೆ ಹಿರಿಯರ ಕಾರ್ಯ । ಕಲಿತ ವಟು ಆದ ಹಿಪ್ಪಿ ಅನ್ಯ
ಮಾಡ್ರನ್ ಲೇಡಿ ಮಾಡ್ರನ್ ಜೋಡಿ ಮಾಡ್ರನ್ ಹ್ಯಾಬಿಟ್ಸ ಆಲ್‌ರೆಡಿ
ಎಂತೊ ಮಾಡ್ರೇಟಾದರು ವಟುಗಳು ಬೀರ್ ಬ್ರಾಂಡಿ ಶಾಸನಡಿಸಿಹರು
ಅಂದಿನ ಇಂದಿನ ವಟು ವಿದ್ಯಾರ್ಥಿಗಳು ಬಾಳಿದ ರೀತಿ ನೀತಿ ॥

ದಟ್ಟದಡಿ ಧೋತ್ರ ತೊಡುವ । ದೊಡ್ಡರುಮಾಲ ಸುತ್ತಿ ಮೆರೆವ
ದುಂಡ ಮೀಸೆ ಜೊಂಡು ಮೀಸೆಯು । ಕೊಲ್ಲೀಮೀಸೆ ಕೊಕ್ಕರಮೀಸೆಯು
ಹಿರಿಯರು ಕೈಯಲ್ಲಿ ಕುಸುಬಿಯ ತಿಕ್ಕಿ ಎಣ್ಣೆ ಹಿಂಡಿ ಉಣತಿದ್ದರು
ಸಡ್ಡುಹೊಡಿದು ದೊಡ್ಡಕುಸ್ತೀ ಆಡುವ ಪೈಲವಾನರು ಹಿಂದಿದ್ದರು
ಇಂದಿನವರು ಚಂದನ್ನ ಮೀಸೆ । ಪ್ರೆಂಚ ತಲ್ವಾರ್ ಆ ಕಟ್ಟ್ ಈಕಟ್ಟ್
ಹಲ್ಕಟ್ಟ್ ಮೀಸಿ ಮಾಡ್ಕೊಳ್ತಾರ । ಗಂಡಸ್ತನದಮೀಸೆ ಸೊರಗಿಸ್ಯಾರ
ಕಟ್ಟ್ ಫುಲ್‌ಕಟ್ ಬ್ಯಾಡಕಟ್ ಹಿಪ್ಪಿಬಿಟ್ಟು ತಲೆ ತಿಪ್ಪಿ ಮಾಡ್ಯಾರ
ಪಿಕ್ಕನಿಕ್ಕು ಸ್ಮೋಕಿಂಗ್ ಡ್ರಿಂಕಿಂಗ್ ಮಾಡುತ ಸೊರಗೆ ಸೊರಗ್ತಾರ
ಅಂದಿನ ಜನರ ಇಂದಿನ ಶಕ್ತಿ ಬಾಳಿದ ರೀತಿ ।ಎಲ್ಲಾ॥

ಶಿಕ್ಷಣ ನೀಡುವ ಗುರುವರರು । ನೇಲೆ ಕುಳಿತಿದ್ದರಾಗವರು
ಶಿಕ್ಷಣ ಬರಲು ಶಿಕ್ಷೆಯುಕೊಡುವ । ಗುರುವಿನ ಸೇವೆಮಾಡಿ ಕಲಿವ
ಅಂದಿನ ಶಿಷ್ಯರು ವೇದಾಗಮ ಶಾಸ್ತ್ರಾದಿ ಪಾಂಡಿತ್ಯ ಗಳಿಸಿದ್ದರು
ಅಂತೆ ಹಿರಿಯರು ಓಲ್ಡ ಈಜ ಗೋಲ್ಡ ಎಂದು ಗಾದೆಯ ಹೇಳಿದರು
ಅಂದು ಶಿಷ್ಯ ಗುರುವಿನ ಕೆಳಗಿದ್ದ । ಇಂದು ಗುರುಜೊತೆಗೆ ಕುಳಿತಿಹರು

ಗುರುವೂ ಒಬ್ಬ ಕಲಿಸುವ ಆಳು । ಎಂದೆನ್ನುವರೀ ಮಕ್ಕಳೆಂ
ಎಂತೊ ಮಾಡ್ರೇಟಾಗಿದೆ ಇಂದಿನ ಎಜ್ಯೂಕೇಶನ್ ಡಿಪಾರ್ಟ್ಮೆಂಟು
ಆಲ್ ಸೆಲ್ಫ ಸೋಸಿಯಲ ಸ್ಟುಡಂಟ್ಸ ಲ್ಯಾಂಡ್ ಆಲ್ ಹೆಲ್ಪಸೀಟ್ಸ
ಮ್ಯೂಮೆಂಟು
ಅಂದಿನ ಇಂದಿನ ಸ್ಟುಡಂಟ್ಸ ಸೆನ್ಸ್ ಆಗಿದೆ ಡಿಫರೆನ್ಸ್
ಇಂದೆಲ್ಲಾ ಆಲ್ ಡಿಬಾರ್ ಸೆನ್ಸ್ । ಎಷ್ಟು ಎಲ್ಲಾ॥ 

## ಆತಗೆ ಗುರುವೆನ್ನು

ರಾಗ: ನಟ್ ನಾರಾಯಣಿ ತಾಲ: ದಾದರಾ

ಆತಗೆ ಗುರುವೆನ್ನು । ಆತಗೆ ಜಗದ್ಗುರುವೆನ್ನು
ಜಗದ್ಗುರುವಿಗೆ ಶರಣು ಶರಣೆನ್ನು ಶರಣುಶರಣೆನ್ನು ॥
ಆತನಿಗೆ ವೀರಶೈವ ಮತಸ್ಥಾಪಕನೆನ್ನು
ಆತನಿಗೆ ವಿಶ್ವಧರ್ಮ ಸಂಘಟಕನೆನ್ನು
ಅಂಥವನಿಗೆ ಶರಣು ಶರಣೆನ್ನು ಶರಣು ಶರಣೆನ್ನು ॥
ಗುರುಶಿಷ್ಯರೆರಡು । ಭಕ್ತಿ ಶಕ್ತಿ ಜೋಡು
ಧರ್ಮ ಕರ್ಮವೆರಡು । ಇಹಪರವೆ ನೋಡು
ಬಂದಿದ್ದು ಎರಡೆಣಿಸುವ ದ್ವೈತದ ಜಾಡು
ದ್ವೈತ ಧರ್ಮದಾಚಾರ್ಯರ ಪಾತ್ರ ನೋಡು
ವೈಷ್ಣವ ಶಿವಧರ್ಮಗಳ ದ್ವೈತ=ಎರಡು
ಆದರವುಗಳೆನ್ನಲ್ಲ ಅದ್ವೈತ=ಒಂದು
ಎಂದಾದರಿಸಿದನು ದ್ವೈತಾಚಾರ್ಯ ಚಿತ್ರ : ಪಾತ್ರ
ಹರಿ ಧರ್ಮ ಪ್ರೇಮಿ ಹರಿಹರ ಪ್ರಸನ್ನ ರೇಣುಕ ॥
ಧರ್ಮ ಸೂತ್ರಗಳ ಸಾರ ಮೂಲ । ಅಹಿಂಸೆ ಎಂದ ರೇಣುಕ ಮೊದಲ
ವೀರ ಪೀಠ ಜಗದ್ಗುರು ವೀರ । ಅಹಿಂಸೆ ತತ್ವ ಪಾಲಿಪ ಮಹಾವೀರ
ಮಹಾವೀರ ಗುರುವೀರರೊಂದೆ ವೀರಭದ್ರ ಪಾತ್ರ
ಸಾರುತಿದೆ ರೇಣುಕರೊಂದಿಗೆ ಜೈನಗುರು ಚಿತ್ರ

ಜೈನಧರ್ಮ ಶಿವಧರ್ಮ ಒಂದೆ ತತ್ವದ ಸಾರ
ಎಂದು ಜೈನ ಬಂಧುಗಳ ಪೂಜೆಕೊಂಡ ಮಹಾವೀರ
ಶ್ರೀಪ್ರಸನ್ನ ರೇಣುಕ ಗಂಗಾಧರ ಜಗದ್ಗುರುವರ !
ಆತನ ಶ್ರೀ ಬೆಳಕೆ ಜಗದ್ಗುರು ರುದ್ರಮುನೀಶ್ವರ ॥

ಶುದ್ಧ ಮತದ ತತ್ವಕೆ ನಾನೆಂದೂ ಬದ್ಧ
ವೀರಶಿವನೆ ಭದ್ರನಾದ । ಶಾಂತಿಮತಕೆ ಬದ್ಧನಾದ
ಸಿದ್ಧ ಮಹಾಪ್ರಬುದ್ಧನಾದ ಶ್ರೀ ಬುದ್ಧನಾದ
ಆ ಸಂಕೇತದೆ ಬುದ್ಧನ ಚಿತ್ರ ತಾ ಪ್ರಸಿದ್ಧಿಸಿದ
ವೀರಗಂಗಾಧರ ಜಗದ್ಗುರು ನಿಜಬುದ್ಧ
ಆ ಬುದ್ಧನ ಚಿತ್ರ ಪ್ರಸನ್ನರೇಣುಕನ ಪಾತ್ರ
ಒಂದಾದ ಸತ್ತ್ವ ಚಿತ್ತಾಭೇದ ಸಾರುತಿಲ್ಲಿ
ಮೆರೆಯುತಿದೆ ರಂಭಾಪುರಿ ಪೀಠದಾಶ್ರಯದಲ್ಲಿ
ಈಪೀಠದ ನಾಯಕ ಜಗದ್ಗುರು ಪ್ರಸನ್ನ ರೇಣುಕ ॥

ಗುರು ತತ್ವವನು ಸಾರುವವನು ಹಿರಿಯ
ಹಿರಿಯ ಶಬ್ದದ ಅರ್ಥವದುವೆ ನಾ ನಾ
ಶೀಖ ಧರ್ಮಪಾಲನೆಯಲ್ಲಿ ಶ್ರೀನಾನಕ
ಶಿಖಾಧರ್ಮ ಪಾಲನೆಯಲ್ಲಿ ಶ್ರೀರೇಣುಕ
ಅದಕಾಗಿ ರೇಣುಕರ ಚಿತ್ರದ ಜೊತೆಗೆ
ಶೀಖರ ಗುರು ನಾನಕರ ಚಿತ್ರ ಮೆರೆಯುತಿದೆ
ಶೀಖಧರ್ಮವಾದರಿಸುವ ಶಿವ ನಾನಕ
ಪ್ರಸನ್ನ ರೇಣುಕ ಗುರುನಾನಕ ॥

ಆದಿಯಿಂದ ಬಂದ ಗುರು ಜಂಗಮರೆ ಸತ್ಯ ವುಳಿದವರಲ್ಲ
ಗುರು ಲಿಂಗ ಜಂಗಮ ಹೊಸದಾಗಿ ಮಾಡುವದಲ್ಲ
ಅಲ್ಲ ಅಲ್ಲಾ ಮಹಮ್ಮದ ರಸೂಲಿಲ್ಲಾ
ಇಸ್ಲಾಂ ಧರ್ಮಕೆ ಶಿವತತ್ವ ದೂರಿಲ್ಲ
ಹಿಂದೂ ಮುಸ್ಲೀಂ ವೈರಿಗಳೆಂದೂ ಅಲ್ಲ

ಎನುವ ಜಿತಾಪೀರಾಲ್ಲಮ ಬಸವ ಪೈಗಂಬರ
ದಿಗಂಬರ ಚಿದಂಬರ ಗುರುವರ ಗಂಗಾಧರ
ಪ್ರತಿರೂಪಿ ಶ್ರಿಜಗದ್ಗುರು ರುದ್ರಮುನೀಶ್ವರ ॥
ಎಲ್ಲಧರ್ಮ ತತ್ವಗಳ ಸಾರ
ಒಂದೆ ಮಾನವ ಧರ್ಮ ವಿಸ್ತಾರ
ಧರ್ಮಕ್ಕೆ ಜಯವಾಗಲಿ
ಮಾನವ ಧರ್ಮಕ್ಕೆ ಜಯವಾಗಲಿ
ಧರ್ಮದಿಂದಲೆ ವಿಶ್ವಕೆ ಶಾಂತಿ
ಎಂದು ಸಾರಿದ ವಿಶ್ವಧರ್ಮ ಸಂಘಟಕ
ಶ್ರೀಪ್ರಸನ್ನ ರೇಣುಕ ಪ್ರಭುರೂಪ ತಾರಕ ॥ ೦

## ಮಂತ್ರಾಲಯ ಮಹಿಮ

ರಾಗ: ಸಾರಂಗ ತಾಲ: ಖವಾಲಿ

ಮಂತ್ರಾಲಯದ ಗುರು ಮಹಿಮ
ರಾಘವೇಂದ್ರ ಅನಾದಿ ರಾಮ ॥
ಮಂಚಾಲೇಶ್ವರಿ ಸುತ ಸೋಮ
ಮಂತ್ರಾಲಯ ಕ್ಷೇತ್ರಾಭಿರಾಮ
ಶಕ್ತಿಯ ಭಕ್ತಿಗೆ ಬಲಭೀಮ
ಭಕ್ತರ ಪೊರೆವ ಭಾರ್ಗವ ರಾಮ ॥
ರಾಘವೇಂದ್ರ ಮಂತ್ರ ನುಡಿಯುವ ಬಾಯಿ
ನಿಜಮಂತ್ರಾಲಯ ಆ ದೇಹವೆ ಗುಡಿ
ಅದೆ ಮಂಚಾಲಯ ಕ್ಷೇತ್ರ ಮಂತ್ರಾಲಯ
ಅಲ್ಲಿಹ ಆತ್ಮ ಪರಮಾತ್ಮ ರಾಘವರಾಯ ॥
ತತ್ವ ತುಂಗೆಯೊಳು ಮೀಯಲುಬೇಕು
ಸಮತಾ ಗುಣಗಂಧ ಧರಿಸಲುಬೇಕು
ಭಕ್ತಿ ಬ್ರಾಹ್ಮಣನಾಗಿ ಭಜಿಸಿದರೆ ಸಾಕು
ನಿತ್ಯದಿ ಕಾಣುವಿಯೊ ರಾಘವೇಂದ್ರನ ಬೆಳಕು ॥ ೦

# ಪತಿದೇವನ ಸೇವೆ

ರಾಗ: ಯಮುನ

ತಾಲ: ಖವಾಲಿ

ಪತಿದೇವನ ಸೇವಾ ಹೆಣ್ಣಿಗೆ
ಸಗ್ಗಸಮನವ್ವ ನಿನ್ನ ಬಾಳಿಗೆ
ಎತಿಯಿಂದ ಮಾಡಿ ಮುಕ್ತಳಾಗು ಕೊನೆಗೆ ||

ಪತಿರೂಪದಲ್ಲಿ ಪರಮೇಶನ ಕಾಣು
ಸತಿಪಾರ್ವತಿಯಂಥೆ ಬಾಳನು ನಡೆಸು
ಸತಿಪತಿಯೊಂದಾಗಿ ಘನರತಿಗೂಡಿ
ಸಮರಸ ಸಗ್ಗ ಸಂತೋಷದಿ ಒಂದಾಗು ||

ಗಂಡನ ಮಾತೆಲ್ಲ ಮಂತ್ರಸಮಾನ
ಚಂದ ಅವನ ನೋಟವೆ ತಂತ್ರಪೂರಣ
ಅವನೊಲುಮೆಯು ಕಾರ್ಯದ ಯಂತ್ರ ನೀನಾಗು
ಸರ್ವ ಸಮನ್ವಯು ಸ್ವತಂತ್ರವ ಕೂಡು ||

ಪತಿಯಿತ್ತ ಕರುಣೆಯೆ ಕಾಮಧೇನು
ಅವನಿತ್ತ ಕುಂಕುಮ ಕಲ್ಪದ ತಿಲಕ
ಧರಿಸಿದ ಮಾಂಗಲ್ಯ ಚಿಂತಾಮಣಿ ಪದಕ
ಸತಿಮನೆ ಸುಖಧಾಮ ನಿಜದೆ ಕೈಲಾಸ || ○

# ಮಲ್ಲಿಕಾರ್ಜುನ

ರಾಗ: ತೋಡಿ

ತಾಲ: ಖವಾಲಿ

ಮಲ್ಲಿಕಾರ್ಜುನಶಕ್ತಿ । ಮಲ್ಲಮ್ಮನ ಭಕ್ತಿ
ಮೇಳಾಗಿ ಶ್ರೀಶೈಲ ಹೆಸರಾಯಿತು
ಎಲ್ಲ ಜನಗಳ ಮುಕ್ತಿ ಗಿರಿಯಾಯಿತು
ಶ್ರೀಗಿರಿಯಾಯಿತು ಗುರು ಗಿರಿಯಾಯಿತು ||

ಅಂತರಂಗದ ಬೆಳಗು ಕರದಿಷ್ಟ ಲಿಂಗಯ್ಯ
ಬಹಿರಂಗದ ಬೆಳಗು ಶ್ರೀಗಿರಿಜ್ಯೋತಿಲಿಂಗಯ್ಯ
ಆ ಲಿಂಗ ಈಲಿಂಗ ಒಂದೆ ಶಿವಲಿಂಗಯ್ಯ
ಎಂದೊರೆದ ಮಲ್ಲಮ್ಮನ ಗುರುಮಲ್ಲನಕ್ಷೇತ್ರ ॥
ಅಕ್ಕಮಹಾದೇವಿ ಭಕ್ತಿಲೆ ಬಂದೆರಗಿದಳಿಲ್ಲಿ
ಅಲ್ಲಮಪ್ರಭುದೇವರು ಐಕ್ಯಾದರಿಲ್ಲಿ
ಮಲ್ಲಯ್ಯಗೆ ಸಿದ್ಧರಾಮ ಭಕ್ತಿ ಬೋನವನುಣಿಸಿ
ಸಿದ್ಧತ್ವ ಪಡೆದು ಬಾಗಿದನು ಶ್ರೀಗಿರಿಯಲ್ಲಿ ॥

ಶ್ರೀಗಿರಿಯ ನೆನೆದವರ ಮನವೆಲ್ಲ ಪಾವನ
ಶ್ರೀಗಿರಿಯ ಕಂಡವರ ಕಣ್ಣೆಲ್ಲ ಪಾವನ
ಶ್ರೀಗಿರಿಗೆ ಬಂದವರ ಬಾಳೆಲ್ಲ ಪಾವನ
ಶ್ರೀಗುರು ಮಲ್ಲಯ್ಯನಕ್ಷೇತ್ರ ಶಿವತಾಣ ॥



## ಕನ್ನಡನಾಡಿನ ಪುಣ್ಯ

ರಾಗ: ಭೈರವಿ | ತಾಲ: ಖವಾಲಿ

ಕನ್ನಡ ನಾಡಿನಪುಣ್ಯ ಕೊಟ್ಟೂರಿನ ಘನಪುಣ್ಯ
ಬಟ್ಟಾಗಿ ಬಂದಾನ ಜಗದೀಶ ಕೊಟ್ಟೂರು ಬಸವೇಶ ॥

ಶಿವನಿರಂಜನ ಭುವಿಗೆ ರಂಜನ
ಆಗಿಬಂದಾನ ಬಸವಣ್ಣ ತಾನಾಗಿ ಬಂದಾನ ಬಸವಣ್ಣ
ಬಲ್ಲಿದ ಭಗವಾನ್ ಬಸವಣ್ಣ ಕೊಟ್ಟೂರಿನ ಗುರುಬಸವಣ್ಣ
ಬೇರಲ್ಲ ಈರ್ವರು ಗಣರಣ್ಣ ಒಬ್ಬನೆ ಆ ಶಿವಮುಕ್ಕಣ್ಣ ॥

ತಂದೆ ಎಂದು ನಂಬಿದವರ ಎತ್ತಿಕೊಂಡಾನ
ಬಂಧು ಎಂದು ಬಾಗಿದವರ ನಿರುತ ಕಾಯ್ತಾನ
ಧರೆಯ ಜನಗಳ ದುರಿತ ಗುಣಗಳ
ಪರಿಹರಿಸಿ ಹರಿಸ್ಯಾನ ಪರಿಹರಿಸಿ ಹರಸ್ಯಾನ ॥

ಬೇಡಿ ಎಂಬ ಜೀವರಿಗೆ ದೇವ ತಾನಾಗಿ ಬೇಡ್ದ ವರ ನೀಡ್ಯಾನ
ಕುರುಡರಿಗೆ ಕಣ್ಣು ಕೊಟ್ಟ್ಯಾನ | ಹೆಳವರಿಗೆ ಕಾಲ ಕೊಟ್ಟ್ಯಾನ
ಸಾಧ್ವಿ ಭಕ್ತಳ ಮೊರೆಯು ಕೇಳುತ ಹಸುಗೂಸಾಗಿ ಹಾಲ ಸವಿದಾನ
ಶಾಪ ಹೊಂದಿ ಹುಲಿಯಾಗಿ ಅಲೆಯುವ ಮನುಜನ ಶಾಪ ಕಳೆದಾನ
ಶಾಪಾನುಗ್ರಹ ಸಮರ್ಥನಾಗಿ ಜಗವನೆಲ್ಲ ಉದ್ಧರಿಸ್ಯಾನ
ಜಗಕೆಲ್ಲಕೆ ಗುರುವಾಗ್ಯಾನ | ಜನಕೆಲ್ಲಕೆ ಗುರುವಾಗ್ಯಾನ ||

## ಜೀವ ನೀನು

ರಾಗ : ಖಮಾಜ — ತಾಲ : ದಾದರ

ಜೀವ ನೀನು | ಜಗವು ನೀನು | ಸೊಗಗೊಳಲಿ ಬಾಳು
ಗಾಳಿ ನೀನು | ಬಯಲು ನೀನು | ಹಗೆಯುದಿರಲಿ ಮುಳಿಸು ||

ಬಿಸಿಲು ನೀನು | ಬೆಳುದಿಂಗಳು ನೀನು | ನಲಿಯುಲಿರಳು ಹಗಲು
ಮನಸು ನೀನು | ದಿನಸು ನೀನು | ಕುಸಿಯದಿರಲಿ ಬದಕು ||

ಸೋಮ ನೀನು | ಕಾಮ ನೀನು | ತಪ್ಪದಿರಲಿ ನೇಮ
ರಾಮ ನೀನು | ಭೀಮ ನೀನು | ಒಪ್ಪಿ ಬರಲಿ ಕೀರ್ತಿ ||

ದೇಹ ನೀನು | ಧ್ಯೇಯ ನೀನು | ಮಿಲಿತ ಬರಲಿ ಎರಡು
ಭಾವ ನೀನು | ಭಕ್ತಿ ನೀನು ! ಶಕ್ತಿಯಾಗು ನೀನು ||

ಭರತ ನೀನು | ವಿರತ ನೀನು | ಮೀಸಲಾಗು ಜನಕೆ
ರೈತ ನೀನು | ರಾಜ ನೀನು | ಪವಿತ್ರ ವಿರಲಿ ಪಾತ್ರಕೆ ||

ತೋಷಿ ನೀನು | ದ್ವೇಷಿ ನೀನು | ಪುಳಿಸು ಬೆಳೆಸು ದೇಶ
ಧರ್ಮ ನೀನು | ಕರ್ಮ ನೀನು | ಬೆಳಗು ಧರತಿ ಪ್ರಕಾಶ

# ಮಂತ್ರಾಲಯ ಮಹಿಮ

ರಾಗ : ಯಮುನ

ತಾಲ : ಖವಾಲಿ

ಮಂತ್ರಾಲಯದ ಗುರು ಮಹಿಮ
ರಾಘವೇಂದ್ರ ಅನಾದಿ ಶ್ರೀರಾಮ ||

ಮಂಚಾಲೇಶ್ವರಿಯ ಸುತ ಸೋಮ
ಮಂತ್ರಾಲಯ ಕ್ಷೇತ್ರಾಭಿರಾಮ
ಶಕ್ತಿಯ ಭಕ್ತಿಗೆ ಬಲಭೀಮ
ಭಕ್ತರ ಪೊರೆವ ಭಾರ್ಗವ ರಾಮ ||

ಮಂಚಾಲಯ ಮಂತ್ರಾಲಯ ಗೈದಂಥೆ
ಮಂತ್ರ ಮೂರುತಿ ರಾಘವೇಂದ್ರ ಮಾಸಂತ
ನಿಂತಲ್ಲಿ ಕುಂತಲ್ಲಿ ನೆನೆದವರ ಮನದಲ್ಲಿ
ಸಂತತ ಇಹ ರಾಘವೇಂದ್ರನೆಲ್ಲರಲ್ಲಿ ||

ರಾಘವೇಂದ್ರ ಮಂತ್ರ ನುಡಿಯುವಬಾಯಿ
ನಿಜ ಮಂತ್ರಾಲಯ ಆದೇಹವೆ ಗುಡಿ
ಆದೆ ಮಂಚಾಲಯ ಕ್ಷೇತ್ರ ಮಂತ್ರಾಲಯ
ಅಲ್ಲಿಹ ಆತ್ಮ ಪರಮಾತ್ಮ ರಾಘವರಾಯ ||

ತತ್ವತುಂಗೆಯೊಳು ಮೀಯಲುಬೇಕು
ಸಮತಾಗುಣ ಗಂಧ ಧರಿಸಲುಬೇಕು
ಭಕ್ತಿ ಬ್ರಾಹ್ಮಣನಾಗಿ ಭಜಿಸಿದರೆ ಸಾಕು
ನಿತ್ಯದಿ ಕಾಣುವಿ ರಾಘವೇಂದ್ರ ಬೆಳಕು ||

ನಾನು ಸಂಗ್ರಹಿಸಿ

ಸಂಗೀತ ಸಂಯೋಜಿಸಿ ಹಾಡಿದ

ಈಗಲೂ ಸಂಗೀತ ಕಛೇರಿಯಲ್ಲಿ ಹಾಡುತ್ತ

ಜನಪ್ರಿಯಗೊಳಿಸಿದ

ಕಲಿಪುರ ಖಾಸಯ್ಯನವರ ಹಾಗೂ ಇತರ

## .... ಮಹಿಮರ ಹಾಡುಗಳು ....

ಇವನ್ನು ಸಾರಸ್ವತ ಪ್ರಪಂಚಕ್ಕೆ ಅರ್ಪಿಸಿದ್ದೇನೆ.

# ಕಲಿಪುರದ ಶ್ರೀ ಖಾಸಯ್ಯ ದೇವರು

ಪುರಾತನ ಕಾಲದಿಂದ ಕಲಿದೇವರಪುರ ಹಾಗು ಕಲಿಪುರ ಎಂದು ಹೆಸರಾಗಿದ್ದ ವಿಜಾಪೂರ ಜಿಲ್ಲೆ ಸಿಂದಗಿ ತಾಲೂಕಿನ ಕಲಕೇರಿಪುರದ ಪಂಚರಂಗ ಸಂಸ್ಥಾನ ಗದ್ದಿಗಿಮಠದ ಪಟ್ಟದಾರ್ಯರು ಶ್ರೀ ಖಾಸಯ್ಯ ದೇವರು. ಕಲಬುರ್ಗಿ ಶ್ರೀ ಶರಣ ಬಸವೇಶ್ವರ ದೀಕ್ಷಾ ಗುರುಗಳಾದ ಶ್ರೀ ಮರುಳಸಿದ್ಧ ಶಿವಾಚಾರ್ಯರ ನಂತರ ಪಟ್ಟಕ್ಕೆ ಬಂದ ಪೂಜ್ಯರು ಇವರು. ಆಂದ್ರ ಪ್ರಾಂತದ ಘನಮಠಾರ್ಯರು ಖಾಸಯ್ಯ ದೇವರ ಸನ್ನಿಧಿಯಲ್ಲಿ ೬-೭ ವರ್ಷ ಇದ್ದು ಕನ್ನಡ ಕಲಿತು ಆಧ್ಯಾತ್ಮದಲ್ಲಿ ಪಳಗಿದರೆಂದು ವದಂತಿ ಅದೆ. ಇದಕ್ಕೆ ಸಾಕ್ಷಿಯಾಗಿ ಘನಮಠರ ಪದ್ಯಗಳಿವೆ. ೨ ಪದಗಳನ್ನು ಮಾತ್ರ ಈ ಸಂಕಲನದಲ್ಲಿ ಸೇರಿಸಲಾಗಿದೆ. ಪವಾಡ ಪುರುಷರಾದ ತತ್ವವೇತ್ತ ಆಶು ಕವಿಗಳಾದ ಖಾಸಯ್ಯ ದೇವರು ಜನವಾಣಿಯಲ್ಲಿ ಕಾಸಯ್ಯನವರೆಂದು ಪ್ರಸಿದ್ಧಿ. ಇವರು ರಚಿಸಿದ ತತ್ವಪದಗಳು ಹಲವಿವೆ. ಸಧ್ಯ ಲಭ್ಯವಾಗಿರುವದರಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೇರಿಸಲಾಗಿದೆ. ಇವರ ಚಾರಿತ್ರ ಗೀತ ಪ್ರಪಂಚ ಶೋಧಿಸಬೇಕಾಗಿದೆ. "ಕಲ್ಲಿದೇವ", "ಕಲಿಪುರನಾಥ", ಅಂಕಿತದ ಹಾಡುಗಳು ಖಾಸಯ್ಯದೇವರವು. ವುಳಿದ ಹಾಡುಗಳ ಕೆಳಗೆ ಆ ಆ ರಚಯಿತರ ಹೆಸರು ಮುದ್ರಿಸಿದೆ. ಓದುಗರು ಗಮನಿಸಬೇಕು.

## ಶ್ರೀದೇವಿ

ರಾಗ : ಭೀಮಪ್ಲಾಸ

ತಾಲ : ಖವಾಲಿ

ಶ್ರೀದೇವಿ ಮಹಾದೇವಿ
ನೆನೆದವರ ಮನದೆ ತುಂಬಿರುವಿ ॥ಪ॥

ದುಷ್ಟ ಜನರಿಗೆ ದುರ್ಗೆ ನೀನಾದೆ
ಶಿಷ್ಟರಿಗೆ ಶುಭಕರಿ ಶಂಕರಿಯಾದೆ
ಭಕ್ತರಿಗೆ ಕಲ್ಯಾಣಿ ಭವಾನಿ ನೀನೆ
ಸೃಷ್ಟಿಯುದ್ಧರಿಸಲು ಸಕಲರ ಪೊರೆವೆ ॥ ॥೧॥

ಭಂಡಲೆಂಡ ಚಾಂಡಾಲರ ಅಳಿಸಲು
ಚಂಡಿ ಚಾಮುಂಡಿ ಶ್ರೀಮಹಿಷ ಮರ್ದಿನಿಯಾದೆ
ಶುಂಭ ನಿಶುಂಭರ ಶಾಂಭವಿ ನೀ ಕಡಿದೆ
ಒಂದೊಂದು ರೂಪದಿ ಹಲವರ ಕಾಯ್ದೆ ॥೨॥

ಆದಿಶಕ್ತಿ ಶಿವೆ ಜಗವ ಸೃಷ್ಟಿಸಿದೆ
ವೇದ ಭಾಷೆಯ ಕೊಟ್ಟು ನೀ ಸರಸ್ವತಿಯಾದೆ
ಮೋದದಿ ಸಲಹುತ ಮಹಲಕ್ಷ್ಮಿ ತಾಯಾದೆ
ಆದಿಗುರು ಕಲಿದೇವನಾತ್ಮ ಶ್ರೀಯಾದೆ ○ ॥೩॥

## ಅಂದು ಬಿಟ್ಟಿಲ್ಲ

ರಾಗ : ಭೂಪ

ತಾಲ : ಖವಾಲಿ

ಅಂದು ಬಿಟ್ಟಿಲ್ಲ ಶಿವನೆ ಇಂದು ಬಿಟ್ಟಿಲ್ಲ
ಎಂದೆಂದು ನಿನ್ನ ಬಿಟ್ಟು ನಾನಿಲ್ಲ ॥ಪ॥

ನಿರ್ಬಯಲಿನೊಳಗಾದ ಬಯಲೆಲ್ಲ ನೀನು
ಆ ಬಯಲ ಬ್ರಹ್ಮಾಂಡದೊಳಗಿರುವೆ ನಾನು
ಅಬಲನಾನಿರುವೆ ಬಲವಂತ ನೀನಿರುವೆ
ಉಭಯತೊಂದಿಗಿದ್ದು ಹೆಪ್ಪು ಏನಾದರೇನು ॥೧॥

ನಿರ್ವಿಕಾರನು ನೀನು ನೀಸೃಷ್ಟಿಸಿರುವಂಥ
ಈ ವಿಕಾರದೊಳಗಾನು ಇದ್ದಿಹೆನು ನೋಡಾ
ಸರ್ವೇಶ ನೀನಾದೆ ನಿನ್ನಡಿಯೊಳ್ ನಾನಾದೆ
ಸರ್ವಾಂತರ್ಯಾಮಿ ನೀನೆಲ್ಲಿಹೆ ಅಲ್ಲಿರುವೆ ನಾನು ||೨||

ಪ್ರಣವ ಸ್ವರೂಪನು ನೀನಂತೆ ಶಿವನೆ
ತೃಣರೂಪ ನಾನಿಹೆನು ನಿಜ ಎಂಬಂತೆ
ತೃಣ ಬಿಟ್ಟು ಪ್ರಣವವಿದೆಯೆ ನನ್ನುಳಿದು ನೀ
ಪ್ರಣವ ಶ್ರೀ ಕಲಿದೇವ ಗುರುವಯ್ಯ ಹೇಳು ? ○ ||೩||

## ತಿಳಿಸುವ ಮಾತಲ್ಲ

ರಾಗ : ಗೌತಿ ತಾಲ : ಏಾದರಾ

ತಿಳಿಸುವ ಮಾತಲ್ಲ ಅದು
ತಿಳಿಸದೆ ತಿಳಿಯುವ ಮಾತಲ್ಲ ||ಪ||

ತಿಳಿದೆನೆಂದವರಿಗೆ ತಿಳಿದಿಲ್ಲ
ತಿಳಿಯಲಾರೆವೆಂದವರಿಗೆ ಹೊಳೆದಿಲ್ಲ
ತಿಳಿಯದೆ ತಿಳಿಯುತ್ತ ಹೋದರೆ
ಹೊಳೆಯುವುದು ತಿಳಿವುದು ವುಳಿವುದು ||ಅ. ಪ||

ಭೇದವಳಿಯಬೇಕು ಮನದ
ವಿವಾದ ಕಳೆಯಬೇಕು
ಸಾಧು ಸಂತರ ಸಂಗದಲ್ಲಿ
ಮೋದದಿ ಬೆರೆತು ವುಳಿದು ಅಲ್ಲಿ
ಸಾಧಿಸಿ ತತ್ವ ತಿಳಿಯಬೇಕು ||೧||

ಹಾದಿ ಕಾಯಬೇಕು ಜಂಗಮದ
ಇದಿರುಗೊಳ್ಳಬೇಕು ಮುದದಿ
ಪಾದ ಪೂಜಿಸಿ ಪಡೆದುಕೊಂಡು
ಬೋಧಾಮೃತ ಉಂಟದಾಗ
ಸಾಧ್ಯವು ನಿನಗೆ ತಿಳಿಮಗನೆ ||೨||

ವಚನ ಹಾಡಬೇಕು ಶರಣರ
ಆಚರಣೆ ಮಾಡಬೇಕು
ಯೋಚನೆ ನಿತ್ಯ ತತ್ವದಲ್ಲಿ
ಆಚರಿಸಿ ಎಲ್ಲಾ ತಿಳಿಯೊ ಇಲ್ಲಿ
ವಿಮೋಚನೆಯಾಗುವದು ತಿಳಿಯೊ ||೩||

ವಿಷಯ ತಿಳಿಯಬೇಕು ಮನವ
ಹಸನುಗೊಳಿಸಬೇಕು ನಿನ್ನ
ಎಸೆವ ಗುರುಲಿಂಗ ಜಂಗಮದ
ಅಸಮ ತತ್ವರೂಪಿ ಕಲ್ಲಿದೇವರ
ಒಸಗೆಯಲ್ಲಿ ಆದನು ತಿಳಿಯಬೇಕು  ||೪||

## ಹಾಡಿರೋ ಪದ

ರಾಗ : ಭೈರವಿ ತಾಲ : ಖವಾಲಿ

ಹಾಡಿರೋ ಪದ ಹಾಡಿರೋ
ಕೂಡಿರೋ ಪರ ಕೂಡಿರೋ ||ಪ||
ಹಾಡಿ ಹೃದಯ ಹರನಾಗಿ ನಿಜಪದ
ಬೇಡಿ ಭಕ್ತರು ನೀವಾಗಿ ||ಅ. ಪ||

ಆಶೆ ಹರಿದು ನಿಷ್ಠೆಯಿಂದಲಿ
ಪಾಶ ಭವದ ಬಿಡಿಸಿ ನಿತ್ಯ
ಕಾಸಿಗಾಗಿ ಹೇಶಿಯಾಗದೆ
ಈಶನ ಪಾದವ ನೋಡಲು ||೧||

ದೇಹ ವೀಣೆ ಮಾಡಿ ನೀವು
ಸೋಹಂಭಾವ ಸುನಾದಗೂಡಿ
ಆಹತ ಅನಾಹತ ಎರಡು ಪಾಡುತ
ಮಹಾದೇವನ ಪಾದ ಕೂಡಲು ||೨||

ಕಣ್ಮನ ಕೊನೆ ಮೊನೆ ತಿರುಗಡೆ
ಹೃನ್ಮನ ಕಟ್ಟ ಶಿರ ಸೋರೆಯಲಿ
ಪ್ರಣವೋಂಕಾರ ಸ್ವರದಿ ಪಾಡುತ
ಅನುದಿನ ಕಲಿದೇವನೊಲಿಸಲು  ||೩||

## ತೂಗುತಾದ

ರಾಗ : ಯಮುನ ತಾಳ : ಖವಾಲಿ

ತೂಗುತಾದ ನೋಡು ಜೋಕಾಲಿ
ಸದ್ಗುರುವಿನ ದಯದಿ । ತೂಗುತಾದ ||ಪ||

ನಾದಬ್ರಹ್ಮನಂಗದೊಳು
ರಂಗಮಂಟಪ ಮಂದಿರದೊಳು
ಕಂಗಳ ಮಹಾಲಿಂಗದೋಳು
ತುಂಬಿ ತುಳುಕಿ ತೂಗಿ ತೂಗಿ ||೧||

ಆರು ಶಾಸ್ತ್ರಕೆ ಕಟ್ಟಿದ ಜೋಕಾಲಿ
ಏರಿ ನೀನು ಕೀಲಿಯು ತೆರಿ
ಏರಿ ನಿಟ್ಟನ ಕೀಲಿಯು ತೆರಿ
ಮಾರಹರ ಶ್ರೀ ಪರಮೇಶ್ವರನಲಿ ||೨||

ಜೋಕಾಲಿ ಆಡಿ ಜೋಲಿಯು ಹೊಡೆದು
ಏಕ ಸೂತ್ರವ ನೀನು ಹಿಡಿದು
ಶಂಕೆಯೆಂಬ ಚಿಣಿಯು ತುಳಿದು
ಭಕ್ತಿಯೆಂಬ ವಿಣೆಯು ಜಿಗಿದು ||೩||

ಅಸಮ ಜೋಕಾಲಿ ಜೀಕುತಲಲ್ಲಿ
ಹಸನ ಮಾಡಿಕೊ ವ್ಯಸನಗಳಿಲ್ಲಿ
ಸೂಸುವ ದೃಷ್ಟಿ ಗುರಿಗೆ ನಿಲ್ಲಿಸಿ
ಎಸೆವ ಕಲಿಪುರನಾಥನ ಒಲಿಸಿ ○ ||೪||

## ಯಾರ ಗೊಡವಿ

ರಾಗ : ಭೂಪ

ತಾಲ : ಖವ್ವಾಲಿ

ಯಾರಗೊಡವಿ ನಮಗೇನೈತಿ
ಹರಧ್ಯಾನದೊಳಗ ಬಹುಮಾನೈತಿ ||ಪ||
ಅರಿವು ಆತ್ಮನ ನೆಲಿ ಪೂರ್ಣೈತಿ
ಪರಮಾತ್ಮನ ದಯೆ ಕರೆವೈತಿ ||ಅ.ಪ||

ಭೂಮಂಡಲ ಮ್ಯಾಲೆ ನಿಂತೈತಿ
ಈ ಖಂಡದೊಳಗೆ ನವ ಖಾಂಡೈತಿ
ಹಿಂದಕ್ಕ ನಮ್ಮನ್ನ ಕೊಂದೈತಿ ಇದು
ಮಿಂಡಗಾರನ ಮಹಾ ಮಿಂಡೈತಿ ||೧||

ಸಂದಿ ಸಂದಿ ಎಲ್ಲಾ ಸೇರೈತಿ
ತಂದಿ ಮಕ್ಕಳಿಗೆಲ್ಲ ಮೀರೈತಿ
ಇಂದು ದೇಶದೇಶೆಲ್ಲ ಬೀರೈತಿ ಇದು
ಎಂದೊ ಆಸೆದಾಗ ನಿಂತು ಕುಂತೈತಿ ||೨||

ಸಾಯೂತನಕ ಒಂದೆಲ್ಲೈತಿ ಇದು
ಸತ್ತು ಹೋದ ಮ್ಯಾಲೆ ಮುಕ್ತೈತಿ
ಆಯ ಕಲಿಪುರವೆಂಬುದಾವಲ್ಲೈತಿ
ರಾಯ ವೀರಘಂಟಿ ಮಡಿವಾಳನೊಳಗೈತಿ ○ ||೩||

## ಕಾವಿ ನೀನು

ರಾಗ : ಪೂರಿಯಾ

ತಾಲ : ತ್ರಿತಾಲ

ಕಾವಿ ನೀನು ಹಾಕಿದರೇನು ಕಾಮನ ಬಿಡಲಿಲ್ಲ
ರುದ್ರಾಕ್ಷಿ ನೀನು ಧರಿಸಿದರೇನು ರುದ್ರ ನೀನಾಗಲಿಲ್ಲ ||ಪ||

ಗಂಧವ ಹಚ್ಚಿ ತಿರುಗುವಿಯಲ್ಲ । ಮನದ ದುರ್ಗಂಧ ಅಳಿಲಿಲ್ಲ
ಚಂದನ ಕುಂಕುಮ ಧರಿಸಿದೆಯಲ್ಲ । ಚಂದ್ರಧಾರಿ ಶಿವನರಿಲಿಲ್ಲ ||೧||

ಭಸ್ಮವ ಧರಿಸಿ ಮೆರೆಯುವಿಯಲ್ಲ । ಕರ್ಮವ ನೀ ಸುಡಲೆ ಇಲ್ಲ
ಸುಮ್ಮನೆ ಜಪಮಣಿ ಎಣಿಸುವಿಯಲ್ಲ । ಬ್ರಹ್ಮಜ್ಞಾನ ಬರಲೇ ಇಲ್ಲ ॥೨॥

ಆವಿಗೆ ಹಾಕಿ ನಡೆಯುವಿಯಲ್ಲ । ಹ್ಯಾವ ಮರೆತು ಬಾಳ್ಳಿಲ್ಲ
ದೇಹದ ತೂಕ ಬೆಳೆಸಿದಿಯಲ್ಲ । ಜೀವದ ತೂಕ ಬೆಳೆಸ್ಲಿಲ್ಲ ॥೩॥

ತ್ಯಾಗದ ಮಾತ ಹೇಳ್ತೀದೆಲ್ಲ । ಭೋಗ ಜೀವನ ನಡೆಸಿದೆಲ್ಲ
ಯೋಗಶಾಸ್ತ್ರದ ನುಡಿ ಬರೆದೆಲ್ಲ । ರೋಗಿಯಾಗಿ ನರಳುವಿಯಲ್ಲ ॥೪॥

ಪಾವನ ಮಠಾಧಿಪತಿಯಾದೆಲ್ಲ । ಪಾವನ ನೀ ಮೊದಲಾಗಲಿಲ್ಲ
ಜೀವರನುದ್ಧರಿಸಲೆ ಇಲ್ಲ । ಕಲಿದೇವರ ಪಾದ ಸೇರಲಿಲ್ಲ ॥೫॥

## ನಾಯಿ ಬಂದಾದಣ್ಣ

ರಾಗ : ಭೈರವಿ ತಾಲ : ಖವಾಲಿ

ನಾಯಿ ಬಂದಾದಣ್ಣ ಅತ್ತಲಾಗಿ ಹೋಗಿರಿ
ನಾಯಿಯಂದ್ರ ನಾಯಿಯಲ್ಲ ಮಾಯದ ಜನ್ಮದ ನರನಾಯಿ ॥ಪ॥

ಕೊಟ್ಟಸಾಲ ಕೊಡದ ನಾಯಿ । ಇಟ್ಟ ಭಾಷೆ ತಪ್ಪುವ ನಾಯಿ
ಕಟ್ಟೆ ಮೇಲೆ ಕೂತಗೊಂಡು । ಅಟ್ಟಹಾಸದಿ ಬೊಗಳುವ ನಾಯಿ ॥೧॥

ಕೊಟ್ಟು ಕುದಿವ ಕೆಟ್ಟ ನಾಯಿ । ಕೊಟ್ಟು ಹಂಗಿಸೂವ ನಾಯಿ
ಕೆಟ್ಟಕೃತಿಯ ಮಾಡುವ ನಾಯಿ । ದುಷ್ಟಗುಣದ ದುರ್ನೀತಿ ನಾಯಿ ॥೨॥

ಧರ್ಮಕಾರ್ಯ ಮಾಡದ ನಾಯಿ । ಕರ್ಮದಿ ಹೊರಳಾಡುವ ನಾಯಿ
ಧೀರಬಾಳು ಬಾಳದ ನಾಯಿ । ಊರ ಜನಕೆ ಹೊರತಾದ ನಾಯಿ ॥೩॥

ದಾನಧರ್ಮ ಮಾಡದ ನಾಯಿ । ಜ್ಞಾನ ಗಳಿಸಲೊಲ್ಲದ ನಾಯಿ
ಸ್ವಾನುಭಾವ ಪುರಾಣ ಶಾಸ್ತ್ರ । ಮಾನ್ಯ ನುಡಿಯ ಕೇಳದ ನಾಯಿ ॥೪॥

ಪಟ್ಟ ಸ್ತ್ರೀಯ ಬಿಟ್ಟಿಹ ನಾಯಿ । ಬಿಟ್ಟೀ ಸ್ತ್ರೀಯನಾಳುವ ನಾಯಿ
ಪಟ್ಟದಾರ್ಯ ಕಲಿದೇವಯ್ಯ । ನಿಷ್ಠೆಯಿಂದಲಿ ಭಜಿಸದ ನಾಯಿ ॥೫॥

# ಭಜನೆಯು ಮಾಡೊ

ರಾಗ : ಭಾಗೇಶ್ರೀ

ತಾಲ : ಖವ್ವಾಲಿ

ಭಜನೆಯ ನೀಮಾಡೊ । ಭವಬಾಧೆಯ ನೀ ದೂಡೊ
ಅಜಹರಿಗಳಿಗಾದಿನೋಡೊ । ಶಿವನೆಜಿಸಿ ಮುಕ್ತಿಬೇಡೊ ॥ಪ॥

ಕುಲಕುಲಕುಲವೆಂದು ಹಾರಾಡಿ । ಕುಲದ ರಾಡಿಯ ಮಾಡಿ
ಛಲದಿ ಎಲ್ಲರಿಗೆರಚಾಡಿ । ಹೊಲಸ ಮಾಡದಿರೊ ಜೋಡಿ
ನಲಿವಿಲಿ ಮುಡಿಯಾಗೊ ಮುಡಿವಳ ದೇವನಂತಾಗೊ ನೀ ॥೧॥

ಬಾಲ್ಯದಿ ಅತ್ತುಅತ್ತು ಹತ್ತಾಯ್ತು । ಹರೆಯದಿ ಹಾರಾಡಿ ಇಪ್ಪತ್ತಾಯ್ತು
ಸುಳ್ಳುಮಾಯದಿ ಘಾಯಕೆನೀ । ಸಂಸಾರದಿ ಪೇಚಾಡಿ ಮೂವತ್ತಾಯ್ತು
ಗಾಳಿ ಹೀಂಗ ಸವೆಸಿ ಆಯುವ । ಹಾಳು ಮಾಡಿದರೇನಾಗುವದೋ ॥೨॥

ಥೋಡೆ ದಿನದ ಸಂತಿ ಭವದ । ಜೋಡಿ ಮರಯೋ ಚಿಂತಿ
ಬ್ಯಾಡೊ ಪರರ ಚಿಂತಿ ಕೇಳು । ಬೇಡೊ ಆತ್ಮದ ಶಾಂತಿ ಸದಾ
ಪೊಡವಿಯೊಳಗ ಕಲಿಪುರಮಠದ । ಒಡೆಯ ಕಲಿದೇವನಲಿ ಬೆರೆಯೊ ॥೩॥

# ಎಂಥಾ ಮಾನುಷ

ರಾಗ : ಭೂಪ

ತಾಲ : ಖವ್ವಾಲಿ

ಎಂಥಾ ಮಾನುಷ ಜನ್ಮ ಪಡೆದು ಬಂದೀರಪಾ ನೀವು
ಮಾಂತ ಶಿವನ ಧ್ಯಾನ ಮಾಡಿರಪ್ಪಯ್ಯಾ ॥ಪ॥

ಅಂತು ಗೊಂತಿಲ್ಲದೆ । ಸಂತೆ ಸಂಸಾರದಿ
ಮುಂತು ಗಾಣದೆ ಕುಂತುಬಿಟ್ಟಿರಪ್ಪಯ್ಯಾ ॥೧॥

ಹೆಣ್ಣು ಹೊನ್ನು ಮಣ್ಣು । ಬೆನ್ನ ಹತ್ತಿ ನೀವು
ಸಣ್ಣಾಗಿ ಮಣ್ಣು ತಿನ್ನಬೇಡಿರಪ್ಪಯ್ಯಾ ॥೨॥

ಕಲಿಯುಗದಲಿ ಎಲಿ । ಎಲಿ ಎನ್ನದೆ ನೀವು
ಕಲಿದೇವರ ಪಾದಕೊಲಿಯಿರಪ್ಪಯ್ಯಾ ॥೩॥

## ಎಷ್ಟು ಹಾರಾಡತಿದ್ದಿ

ರಾಗ : ಛಾಯನಟ್ ತಾಳ : ತ್ರಿತಾಲಿ

ಎಷ್ಟು ಹಾರಾಡತಿದ್ದಿ ಬಾಳಿಗೆ
ಸಪ್ತು ನಡೆದೆ ಮಸಣ ಭೂಮಿಗೆ ||ಪ||

ನಿನ್ನ ಬಟ್ಟೆಯನೆ ನಿನಗೆ ಹಾಕಿದ್ದರೂ
ನಿನ್ನ ಆಭರಣಗಳ ಸಿಂಗರಿಸಿದ್ದರೂ
ನಿನ್ನ ಬಳಗವೆ ಗುಂಪುಗೂಡಿದ್ದರು
ಏನಿದ್ದರೇನು ಬುದ್ಧ ನೀನಿಲ್ಲಲ್ಲೊ ||೧||

ಸಾಗಿಹೆ ಮಸಣದ ಮಣ್ಣಿನ ಮನೆಗೆ
ಭೋಗ ಭಾಗ್ಯವು ಏನಿಲ್ಲವೊ ಕೊನೆಗೆ
ಆವುದು ನನ್ನದಲ್ಲ ಎಂಬ ಉತ್ತರಕೆ
ಅಹುದೆಂದು ಗೋಣು ಅಲ್ಲಾಡಿಸುತ ನಡೆದೆ ||೨||

ಅಗಲಿದೆ ಎಂದು ಬಾಯಿ ಬಡಿದುಕೊಳ್ಳುವರು
ಹುಗಿದು ಬಂದು ಹೋಳಿಗೆ ಹೊಡಿಯುವರು
ಬಗಿದು ನೋಡೊ ಆರಾರಿಲ್ಲ ನಿನ್ನ ಜೊತೆಗೆ
ಶ್ರೀಗುರು ಕಲಿದೇವನೊಬ್ಬನೆ ಸಂಗಾತಕೆ ||೩||

## ರತ್ನ ಬಂದಿದೆ

ರಾಗ : ಸಾರಂಗ ತಾಲ : ದೀಪಚಂದಿ

ರತ್ನ ಬಂದಿದೆ ನೋಡಿ | ಯತ್ನ ಮಾಡಿಕೊಳ್ಳಿರಿ
ಸತ್ಪುರುಷರು ಬೆಲೆ ಮಾಡುವ ಶಿವಪುರದ ||ಪ||

ಗೌಡಗೆ ಸಿಕ್ಕಿಲ್ಲ ದೇಶಾಯಿಗೆ ದಕ್ಕಿಲ್ಲ
ನಾಡರಸರಿಗೆಲ್ಲ ಅದರ ಸುಳಿವೆ ಹತ್ತಿಲ್ಲ
ನೋಡು ತಿಳಿದು ನಿನ್ನಲ್ಲಿ ಅದು ಆದೊ
ಬೇಡು ಗುರುವಿನ ದಯವ ಆಗ ಕಾಣ್ತಾದೊ ||೧||

ಅಷ್ಟದಳದೊಳಗಿಂದ ತೋರುತಾದ ಆ ರತ್ನ
ದೃಷ್ಟಿ ನಿಲ್ಲಲು ಪ್ರಕಟಗೊಳ್ಳುತಾದ ರತ್ನ
ಸೃಷ್ಟಿ ಸೃಷ್ಟೀಶನ ಕೊಳ್ಳುವ ಮಹಾ ರತ್ನ
ಶ್ರೇಷ್ಠ ವಿರತರಿಗೊಲಿದು ಬೆಳಗುವ ರತ್ನ ॥೨॥

ಅರಿವಿನ ಅರಮನೆಯ ಸಿರಿರಾಜ ರತ್ನ
ಕರದ ಕದದೊಳಗೊಪ್ಪಿ ಮೆರೆಯುವ ರತ್ನ
ಶಿರದ ತ್ರಿಜೂರಿಯಲಿ ಭದ್ರವಾಗಿರುವಂಥಾ
ಗುರು ಕಲ್ಲಿದೇವಯ್ಯ ನಿಜ ಆಸ್ತಿ ಶಿವರತ್ನ  ॥೩॥

## ಶಿವ ಮಂತ್ರ

ರಾಗ : ಮಾಲಕಂಸ ತಾಲ : ಖವಾಲಿ

ಶಿವಮಂತ್ರ ಜೀವನವಮಯವಾಯ್ತು
ಭವ ದಾಟುವ ದಾರಿ ಸುಗಮಾಯ್ತು ॥ಪ॥

ಆಸನ ಬಲಿತೂರ್ಧ್ವ ಮುಖವಾಯ್ತು ತುದಿ
ನಾಸಿಕದಗ್ರದಲಿ ಅನಿಮಿಷವಾಯ್ತು
ಸೂಸುವ ಮನಸೊಬ್ಬುಳಿಯಾಯ್ತು ಶಿವ
ಘೋಷದೊಳು ಪೊಕ್ಕು ಲಯವಾಯ್ತು ॥೧॥

ಚಂದ್ರ ರವಿಗಳೊಂದೆ ರೂಪಾಯ್ತು ನಾ
ಗೇಂದ್ರನ ಫಣಿ ಎದ್ದು ಮೇಲಾಯ್ತು
ಚಂದ ಮಾಣಿಕ ರತ್ನ ಬೆಲೆಯಾಯ್ತು ದೇ
ವೇಂದ್ರನ ಸಭೆಯಲ್ಲಿ ಬೆಳಕಾಯ್ತು ॥೨॥

ಬ್ರಹ್ಮನಾಳ ವಿಷ್ಣು ರೂಪಾಯ್ತು ಪರ
ಬ್ರಹ್ಮ ಜ್ಯೋತಿರ್ಮಯವೆ ಲಿಂಗಾಯ್ತು
ನಿರ್ಮಲ ನಿಜಸೌಖ್ಯ ಘನವಾಯ್ತು ಶ್ರೀ
ಚಿನ್ಮಯ ಕಲಿದೇವನ ಕೃಪೆಯಾಯ್ತು ● ॥೩॥

# ಯಾಕೆ ಭವಸಾಗರಕೆ

ರಾಗ : ದುರ್ಗಾಶ್ರೀ ತಾಲ : ದೀಪಚಂದಿ

ಯಾಕೆ ಭವಸಾಗರಕೆ ಬಂದೆಣ್ಣಾ । ಬಂದಾವ ಬಂಧಿ
ಜೋಕೆಯಿಂದ ಈಸಿ ಸಾಗಣ್ಣಾ । ಈಸಿ ಈಸಿ ಆಚೆ ಹೋಗಣ್ಣಾ ||ಪ||

ಅರಿವನೀವ ಕುರುಹು ಯಾಚಿಸಣ್ಣಾ
ಹರಿಹರರು ಬ್ರಹ್ಮಾದಿಗಳ ಭೇದ ನೀನು ಮರಿಯಣ್ಣಾ
ಅರಿವನಿತ್ತ ಗುರುವೆ ಸಕಲವು
ಸರ್ವ ದೇವರು ಎಂದು ನಂಬಿ
ನಿರುತ ಗುರುವಿನ ಸ್ಮರಿಸಬೇಕಣ್ಣಾ ಭವ ದಾಟೊ ಯಣ್ಣಾ ||೧||

ಜಡವು ತನು ಮನದಾಸೆ ಬೇಡಣ್ಣಾ
ಅಡಿಗಡಿಗೆ ಶ್ರೀಗುರು ಪಾದವ ಪೂಜೆ ಮಾಡಬೇಕಣ್ಣಾ
ಈಡಾ ಪಿಂಗಳ ಸಮದೆ ಸೋಸಿ
ದೃಷ್ಟಿ ನಾಸಿಕದಲ್ಲಿ ಇರಿಸಿ
ಒಡನೆ ಗಾಳಿಯು ನಿಲಿಸಬೇಕಣ್ಣಾ । ಯೋಗದಲಿ ಯಣ್ಣಾ ||೨||

ಅಷ್ಟಮದಗಳ ಅಳಿಯಬೇಕಣ್ಣಾ
ನಿಷ್ಠೆಯಲಿ ನೀನು ನಿತ್ಯ ಗುರುವಿನ ಧ್ಯಾನಮಾಡಣ್ಣಾ
ಕೆಟ್ಟ ಕರ್ಮದ ಗುಣಗಳಳಿದು
ಶ್ರೇಷ್ಠ ಕುಂಭವ ಬಲಿಸಿ ಗಳಿಸಿ
ಸೃಷ್ಟಿಗೀಶನ ಭಜನೆ ಮಾಡಣ್ಣಾ । ನಿಜ ಕಾಣೊಯಣ್ಣಾ ||೩||

ಕರ್ತೃ ಶಿವನ ಮರ್ತ್ಯ ಇದುವಣ್ಣಾ
ಗುರ್ತಿಲೆ ಸಾಗೊ ಹಿಂದೆ ಬರದೆ ಮುಂದೆ ಹೋಗಣ್ಣಾ
ಅತ್ತಿ ಮಾವ ಬಂಧು ಬಳಗ
ಮತ್ತೆ ಮಡದಿಯರಿಗೆ ದುಡಿದು
ಸತ್ತುಹೋಗಲುಬೇಡ ಕೇಳಣ್ಣಾ । ಮುಕ್ತಬೇಡ ಮಣ್ಣಾ ||೪||

ಜನನ ಮರಣದ ಜಂಟಿ ಕಳಿಯಣ್ಣ
ಬಿನಗೂ ಸಂಸಾರದಲಿ ಬಿದ್ದು ಬಳಲಬೇಡಣ್ಣ
ಜನನಕಾದಿ ಬೇಗೆ ಕಡಿದು
ಮರಣ ಭಯವ ಗೆದ್ದು ನೀನು
ನೆನೆದು ಕಲಿದೇವಯ್ನ ಕೂಡಣ್ಣ । ಮುಕ್ತಗೊ ಜಾಣ ○ ||೫||

## ಹ್ಯಾಂಗ ಮರಿಯಲಿ

ರಾಗ : ಕಾಪಿ — ತಾಲ : ಖವಾಲಿ

ಹ್ಯಾಂಗ ಮರಿಯಲಿ ಗುರುವಿನ
ಅಂಗಜ ಗುಣಗಳ ತಂಗಿ ಅಳಿಸಿದ ಶಿವನ ||ಪ||

ಬೋಧವ ನೀಡಿ ಮನಸಿನ ಗುಣಗಳ
ಭೇದವ ಬಿಡಿಸಿ ಭಾವಕೆ ನಿಜಗುಣ
ಸಾಧುತ್ವವನು ಹರಸಿದ ಬಾಳಿಗೆ
ಬೋಧಿಗೆಯಾದ ಪರಮನ ಗುರುವಿನ ||೧||

ಅಂಗವೆ ಅಡವಿಯೊಳಗೆ ಇರುವ
ಮಂಗ ಮಾಯದ ಮೃಗಗಳ ಕೊಂದು
ಚಂದ ಸುಜ್ಞಾನ ಗಿಡಗಳ ಬೆಳೆಸಿ
ಅಂದಿಂದಿಗೆ ಸೃಷ್ಟಿ ಮಾಡುವ ಅಜನ ||೨||

ಅಷ್ಟಮದದ ಕೋಣಾದಿಗಳ ಹತ್ತಿ
ಷಡ್ ವೈರಿಗಳನು ಸದೆಬಡಿದಿಕ್ಕಿ
ಶ್ರೇಷ್ಠವಾದ ಮಾನವ ಗುಣಗಳನು
ರಕ್ಷಿಸಿ ಪೊರೆಯುತ್ತಿರುವ ವಿಷ್ಣುವಿನ ||೩||

ಹುಟ್ಟಿನ ಬೆಲೆ ಸಾವಿನ ಲಯವೆಂದು
ಅನಿಷ್ಟದ ಲಯವು ರಕ್ಷಣೆಗೆಂದು
ಸೃಷ್ಟಿ ಸಮತೆಗೆ ಲಯವನೆ ಮಾಡುತ
ಶ್ರೇಷ್ಠದಿ ಮೆರೆವ ಕಲಿದೇವ ರುದ್ರನ ○ ||೪||

## ಎಲ್ಲಾ ಇಲ್ಲೆ

ರಾಗ : ಭೂಪಾಲಿ ತಾಳ : ಖವಾಲಿ

ಎಲ್ಲಾ ಇಲ್ಲೆ ಇರತೈತಿ ಯಾಕಳತಿ
ಬಾಳು ಸಾರ್ಥಕವಾಗುವಂಥ ಮಾರ್ಗ ನೀ ಮರತಿ ||ಪ||
ಅಲ್ಲಮ ಶಿವಕೃಪಾ ತೀರಿದ ಮ್ಯಾಲ
ಇಲ್ಲೇಸು ದಿನ ನೀ ಸ್ಥಿರವಾಗಿರತಿ ||ಅ. ಪ||

ಕಾಯ ಜೀವವೆರಡು ಜೋಡ ಇದರ
ಸಾಯ ತಿಳಿದು ನೀನು ಮುಂದೆ ನೋಡ
ಮಾಯ ಛಾಯ ಈಡಾಡು ಶರಣರ
ಲಾಯದೊಳಗ ನೀ ಮನವನಿಡ ||೧||

ಮಂದ ಬುದ್ಧಿ ನಿಂದು ಕರೆವೈತಿ ಮರ್ತ್ಯಕ
ಬಂದದ್ದ್ಯಾತಕ ಅನ್ನುವದು ಮರತ ಕೂತಿ
ಚಂದ ತೋರತೈತಿ ಈಡಾಯದ ಗತಿ
ಮುಂದ ನಿಂತಾರ ಬಾಗು ಗುರು ಚರ ತತಿ ||೨||

ಯಾರೊ ನೀನೆಲ್ಲಿದ್ದಿ ಇಲ್ಲಿಗೆ ಬಂದಿ ನಿನ್ನ
ದಾರ್‍ಯಾಗ ಇದ್ದಾರಲ್ಲೋ ನಿನ್ನೆಲ್ಲ ಮಂದಿ
ಸಂಸಾರದೊಳಗೆ ನೊಂದಿ ಬೆಂದಿ ಕಡೆಗೆ
ವೀರ ಕಲಿದೇವನ ಏಜಿಸೋ ನೀ ನಂಬಿ ||೩||

## ಹೇ ಶಿವನೇ

ರಾಗ : ಭೀಮಪ್ಲಾಸ ತಾಲ : ಖವಾಲಿ

ಹೇ ಶಿವನೆ ಪರಶಿವನೆ
ಕರುಣದಿ ಪೊರೆವ ಕರುಣಾಕರನೆ ||ಪ||
ಶರಣರ ಜೀವನ ಬೆಳಗಿಸಿದವನೆ
ವರ ಕಲಿಪುರದೆ ನೆಲೆ ನಿಂತವನೆ ||ಅ. ಪ||

ಬೇಡಿದವರಿಗೆಲ್ಲ ಬೇಡಿದ್ದು ಕೊಡುವೆ
ನಾಡರಿಯೆ ಬಸವೇಶನೆಂದಾಗ್ಗ
ನೋಡು ಜಂಗಮರಡಿ ಸಂಪದವೆಂದೆ
ದಿಡಿಗಿಲಿ ಜಲ ಚಿಮ್ಮಿ ಮುತ್ತುರತ್ನದ ರಾಶಿ
ಮಾಡಿದ ಮಡಿವಾಳ ದೇವನು ನೀನೆ ||೧||

ಶಿವಣಗಿಪುರದ ಚಂದಣ್ಣನಿಗೆ
ಜವದಿಂ ಲಿಂಗವ ಕರುಣಿಸಿದವನೆ
ಶಿವಶರಣ ಶ್ರೀ ಕಲಿಖ್ಯಾತಯ್ಯಗೆ
ಶಿವಶಿವ ಎನ್ನುತ ಬದುಕಿಸಿದವನೆ
ಶಿವಗಿಂತಧಿಕ ನೀ ಕಲಿದೇವ ಸುತನೆ ||೨||

ಶರಣರ ಮನದ ಮೈಲಿಗೆ ತೊಳೆದೆ
ದುರುಳ ಬಿಜ್ಜಳನ ಗರುವವ ಕಳೆದೆ
ಪರಮ ಭಕ್ತರನು ನಿರುತದಿ ಪೊರೆದೆ
ಗುರು ವೀರಘಂಟೇಶನೊಡಗೂಡಿ ಬೆರೆದೆ
ವೀರಘಂಟೈಮಡಿವಾಳನೆಂದ್ಹೆಸರಾದೆ  ||೩||

## ಸುಳ್ಳೆ ತಿರಗತಿ

ರಾಗ : ಭೂಪ　　　　ತಾಲ : ಖವಾಲಿ

ಸುಳ್ಳ ಸುಳ್ಳೆ ತಿರಗತಿ ಜೀವ
ಮಳ್ಳ ನಿನಗೆ ಸಿಗುವದೆ ಮುಕುತಿ ||ಪ||

ಅಲ್ಲಲ್ಲಿ ತಿರುಗಾಡಿ ಹೊತ್ತ ಕಳೆಯುತ್ತಿ
ಎಲ್ಲಾ ಕೆದುರುವ ಗೊಳ್ಳೆ ನರಿಯಾಗತಿ
ಅಲ್ಲದಕೊಲಿದು ಮಾನಗೇಡಿಯಾಗುತಿ
ಬಲ್ಲಿದ ಶರಣರ ಮರೆತು ನೀ ಸಾಯ್ತಿ ||೧||

ಹಾಳ್ಹಳ್ಳಿ ಹರಿತ್ಯೆತಿ ಸುಮ್ಮನೆ ನಿಂತಿ
ಕಾಲಕೂಟ ವಿಷ ಸಂಗ್ತಿಯು ಧಾವತಿ
ಕಾಲ ಯಮನರು ಎಳಿತಾರ ಕೋತಿ
ವೇಳೆಯ ಖಬರಿಲ್ಲದೆ ನೀ ಕೂತಿ ॥೨॥

ಇಷ್ಟಲಿಂಗ ಧರಿಸಿ ನೀ ಭಜಿಸು
ಶ್ರೇಷ್ಠ ಗುರು ಚರ ಶರಣರ ನುತಿಸು
ಗುಟ್ಟಾಗಿ ಮಹಾಮಂತ್ರ ಜಪಿಸು ಜಪಿಸು
ಸೃಷ್ಟೀಶ ಖಾಸ ಗುರು ಕಲಿದೇವನೊಲಿಸು ○ ॥೩॥

## ಹಸುಗೂಸು

ರಾಗ : ತಿಲಕಾಮೋದ ತಾಲ : ಖವಾಲಿ

ಹಸಗೂಸ ಕೇಳ ನೀನೆನ್ನ ಮನಸ
ಅಸಮ ಗುರು ಹಿರಿಯರ ಮಾಡಿದೆ ಮನಸ ॥ಪ॥

ಚಂದ ಚಾರಕೆ ಶಿಲುಕಿ ಹಾಳಾಗಬೇಡ
ನಿಂದು ನೀ ತಿಳಿದರೆ ನೀನೆ ಎಲ್ಲಾ ನೋಡ
ಅಂದಂದಿಗೆ ಚೌರ್ಯಾಂಶಿ ಜನ್ಮಂಗಳ
ದಂದುಗದಿ ತಿರುಗಿ ಬಂದೆಲ್ಲ ಕೂಸ ॥೧॥

ಆದಿ ಅನಾದಿಯು ತಿಳಿಯುವ ಕೂಸ
ಆಧುನಿಕದಲಿ ಎಲ್ಲಾ ಮರತೆಲ್ಲ ಕೂಸ
ನಾದ ಬಿಂದು ಕಲೆಯು ಮಾಟದ ಕೂಸ
ಸಾಧನೆ ನೀ ಮಾಡಿ ಲೋಲಾಡು ಕೂಸ ॥೨॥

ಗುರು ಬೋಧಾಮೃತವ ಕುಡಿಯೋ ಕೂಸ
ಅರಿತು ಗುರು ಮಗನಾಗಿ ಬಾಳೆನ್ನ ಕೂಸ
ಉರಿಯುಂಡ ಕರ್ಪೂರದಂತಾಗೆನ್ನ ಮನಸ
ಗುರು ಕಲ್ಲಿದೇವಯ್ನ ಬೆರಿಯೆನ್ನ ಕೂಸ ○ ॥೩॥

## ಬೆಳಗತಾದೆ

ರಾಗ : ದುರ್ಗಾ ತಾಲ : ದಾದರಾ

ಬೆಳಗತಾದೆ ಜ್ಯೋತಿ ಬೆಳಗತಾದೆ
ಬೆಳಗತಾದೆ ತಂಗಿ ನೋಡೆ ನೋಡವ್ವ ||ಪ||
ಥಳಥಳನೆ ಥಳಿಸೂತ ಒಳಗ್ಹೊರಗೆ ಎಸಗುತ
ಕಳೆಯುಳ್ಳ ಜ್ಯೋತಿ ಬೆಳಗತಾದೆ ನೋಡವ್ವ ||ಅ.ಪ||
ಎಣ್ಣೆಬತ್ತಿಗಳ ಹಂಗು ಹಂಗುಹಾನಿಲ್ಲದೆ
ಕಣ್ಣ ಕಪ್ಪಿನೊಳಗೆ ಬೆಳಗತಾದೆ ನೋಡೆ ||೧||
ಭ್ರೂಮಧ್ಯ ಪಶಿಸೋಮ ಸೂರ್ಯವೀಥಿ ನಡುವೆ
ಹೇಮ ಮಂಟಪದೊಳಗೆ ಬೆಳಗತಾದೆ |೨||
ಪಶ್ಚಿಮ ಸ್ಥಳದೊಳಗೆ ಶ್ರೀ ಸಚ್ಚಿದಾನಂದ
ನಿಶ್ಚಿಂತಮಯ ಜ್ಯೋತಿ ಬೆಳಗತಾದೆ ||೩||
ಬಟ್ಟಬಯಲೊಳಗೊಂದು ಹುಟ್ಟಿತು ಚಂದ್ರಾಮ
ಮುಟ್ಟದಲೆ ಬೆಳಗುವದು ನೋಡೆ ತಂಗೆವ್ವ ||೪||
ಗುರು ಕಲ್ಲಿದೇವ ಶಿವನು ತಾನೆ ತಾನಾಗಿರುವ
ಪರಂ ಪರಮಾತ್ಮ ಜ್ಯೋತಿ ಬೆಳಗತಾದೆ ೦ ೫||

## ನಿಜಗುಣ ಹಿಡಿ

ರಾಗ : ಮಿಶ್ರಪೀಲು ತಾಲ : ಖವಾಲಿ

ನಿಜಗುಣ ಹಿಡಿ ತಾಡಿ ನಿಶ್ಚಿಂತನಾಗಿ
ನಿಜಗುಣ ಹಿಡಿ ಗುರುಪಾದಕೊಡಗೂಡಿ ||ಪ||
ನಿಜವು ತಪ್ಪಿದ ಮೇಲೆ ಆವಗೇಡಿ ಆವಜಾತಿ
ಅಜಗಜಾಂತ ಶಿವನಿಗೆ ನಿನಗೆ ಸರಿಸರಿ ದೂರಸರಿ ||ಅ.ಪ||
ಯಾತಕಿಲ್ಲಿಗಿ ಬಂದಿ | ಎಲ್ಲಾನು ಮೈಮರೆದು ನಿಂದಿ
ಯಾತಕಿಲ್ಲಿಗಿ ಬಂದಿ | ಯರವಿನ ಕಾಯುವ ತಂದಿ
ಯರವಿನವರು ಬಂದು ಯರವು ಒಯ್ಯುರೆ ನೀ
ಕೆರವಿನಂಗ ಮಾಡಿ ಮಾಡೇಕೆ ಕುಂತಿ ? ||೧||

ವ್ಯರ್ಥವಿದು ಕೇಳ ಸಂಸಾರ । ಸುನ್ನಿತೊಡಕಾಯ್ತು ಪೂರ
ವ್ಯರ್ಥವಿದು ಸಂಸಾರ ಕೇಳು । ಇದರೊಳು ಆಗೋ ನೀಪಾರ
ಪಾರಾಗಲು ನೀನು ನೀಚ ಗುಣವ ಕಳೆದು
ಪರತತ್ವದೊಳಗೆ ಕೂಡೋ ನೀ ಧೀರ ॥೨॥
ವೀರಘಂಟೇಶ್ವರರು । ಮಹಿಮ ಶ್ರೀ ಮಡಿವಾಳೇಶ್ವರರು
ಈ ಗುರು ಶಿಷ್ಯರ ಗದ್ದಿಗಿ । ಮಠವಾತ್ಮ ದೇಹ ಗುಡಿಕಟ್ಟಿ
ಪರಮ ಗುರು ಕಲಿದೇವ ಕೂತಾನೋ ಘಟ್ಟಿ
ಅರಿವಿಲೆ ಬಾಗಿದರೆ ನೀ ಭವಗೆಟ್ಟಿ ॥೩॥

## ಕತ್ತೆಗೆ ರುಚಿ

ರಾಗ : ಕಾಫೀ ತಾಲ : ತೀನತಾಲ

ಕತ್ತೆಗೆ ರುಚಿಯೇನೋ ಕರಿಗಡಬು
ತಿಪ್ಪಿ ದಂಟು ರುಚಿಯೆಂದು ತಿನ್ನುವದು ।ಪ॥
ಮರ್ತ್ಯದ ಮನುಜಗೆ ತತ್ವದ ಹಾಲು
ಹಿತವೇನೊ ಅವಗ ಮಾಮೂಲಿ ಕೂಳು । ಅ.ಪ॥
ಮೂಗುತಿ ಮಾಡಿದ ಪತ್ತಾರ್ನ ನೆಚ್ಚಿ
ಮೂಗ ಮಾಡಿದವನ ಮರೆವುದು ಹುಚ್ಚಿ
ಮೂಗಿರದಿರೆ ಮೂಗುತಿ ಎಲ್ಲಿಡತಿತ್ತು
ಜಿಗಿತೈತಿ ಎತ್ತೆತ್ರ ಮರ್ಕಟ ಗತ್ತು ॥೧॥
ನೆಚ್ಚಲುಬಾದೋ ಸಾಕಿದ ನಾಯಂತ
ಬಿಚ್ಚಿ ಬಿಡೋ ಎಲಬು ತಿನುವದು
ಹುಚ್ಚು ಮನಸಿನ ಬೆನ್ನು ಹತ್ತಿದ್ದು
ಹುಚ್ಚು ಬಿಡೋ ದೇವನ ಕೂಡೋ ॥೨॥
ಹೋತಿನ ಕೊರಳ ಮೊಲೆಗಳ ಹಿಂಡಿ
ಸಿಸ್ತೀಲೆ ಕುಡೀತೀನೆನ್ನೊದೇನು ಖೋಡಿ
ಯಾತಕೂ ಬಾರದ ಮಾಯದ ರಾಡಿ
ಸ್ವಚ್ಛ ತೊಳಿದುಕೋ ಗುರುವಿನೊಳಾಡಿ ॥೩॥

ಕಲಿಸಿದ ಮಾತು ಕಟ್ಟಿದ ಬುತ್ತಿ
ನೆಲಿಸಿದ ಮರ್ತ್ಯ ಕೂಡಿದ ದೇಹ
ಸಲೆ ತಿಳಿಯೋ ನೀ ಕೊನೆತನಕೆಲ್ಲೊ ಶಿ
ಹಳಸಿ ಹೋಗದಿರು ದೇವನ ಭಜಿಸೊ ।೪॥

ಸತ್ತು ಬಾಯುವ ದೇಹದಿ ಕೂತು
ಕತ್ತೆಯಾಗದಿರು ತಿಪ್ಪೀಲಿ ಮೆರೆದು
ತತ್ವದಮೃತ ಕುಡಿಸುವ ಗುರುವರ
ಸತ್ತ್ರಮ ಕಲಿದೇವನಡಿ ಕೊಂಡಾಡು ○ ॥೫॥

## ಹೆಣ್ಣಿಗೆ

ರಾಗ : ಸಾರಂಗ ತಾಲ : ತ್ರಿತಾಲ

ಹೆಣ್ಣಿಗೆ ಮರುಳಾಗಬೇಡ। ಎಂದೂ
ಕಣ್ಣೆತ್ತಿ ನೋಡಬೇಡ ಅವಳ ॥ಪ॥

ಕಣ್ಣಿಟ್ಟು ಕೀಚಕ ಕೆಟ್ಟ ಪರ
ಹೆಣ್ಣಿಗಾಗಿ ರಾವಣ ತಲೆಕೊಟ್ಟ
ಇನ್ನೆಷ್ಟು ಹೇಳಲಾ ನಷ್ಟ ಹೆರ
ಹೆಣ್ಣ ಮೋಹಿಸಿದರೆ ಇರುವದು ಕಷ್ಟ ।೧॥

ದೂಷಿಸದಿರು ದುರುಳದಿ ಕಣ್ಣ
ಹೇಶಿ ಮನವೃತ್ತಿ ಆದರದೆ ಗುಲ್ಲ
ಗಾಸಿಗೊಳಿಸಲು ನಿನ್ನ ಬಟ್ಟ ಕುಚ
ದಾಸಿಯರ ನೋಡಹಚ್ಚಿಸಿ ಒದಿಸುವದೊ ॥೨॥

ಹಶಿವು ಇಲ್ಲದ ಸವಿಯೂಟ। ತನ್ನ
ವಶಕ್ಕೆ ಬಾರದ ಪರಸ್ತ್ರೀಯರ ಕೂಟ
ದೇಶದೊಳಪಕೀರ್ತಿ ಮಾಟಬಿಡು
ಈಶ ಕಲಿದೇವರ ಪಾದನೋಡೊ ○ ೩॥

## ಗುರು ಪಡೆಯಬೇಕು

ರಾಗ : ಘೋರಕ ಕಲ್ಯಾಣಿ ತಾಲ : ತ್ರೀಸತಾಲ

ಗುರುವ ಪಡೆಯಬೇಕೆಂಥವನ
ದುರಿತ ನಿವಾರಿಸುವಂಥವನ ||ಪ||
ಅರುಹಿನ ಕುರುಹ ಕರದಲಿ ಕೊಟ್ಟ
ಪರತತ್ವಾಮೃತನುಣಿಸುವಂಥವನ ||ಅ.ಪ||

ಕಾಮ ಕ್ರೋಧವ ಗೆದ್ದಂಥವನ
ನೇಮದಿ ಲೋಭಾದಿಗಳ ಮುರಿದವನ
ಸಾಧಿಸಿ ಪರತತ್ವವನು ನಿಜದಲ್ಲಿ
ಬೋಧಿಸಿ ಉದ್ಧರಿಸುವಂಥವನ ||೧||

ಅಷ್ಟಾವರಣ ಅಂಗವಾಗಿದ್ದವನ
ಶ್ರೇಷ್ಠ ಪಂಚಾಚಾರ ಪ್ರಾಣವಾದವನ
ಷಟ್ಸ್ಥಲ ಆತ್ಮವಾಗಿಸಿದವನ
ಸೃಷ್ಟೀಶ ತಾನಾಗಿ ತೋರುವವನ ||೨||

ಪರಿತಾಪ ಕಳೆಯುವಂಥವನ । ಜನ
ರರಿಯುತ ಪಾವನ ಮಾಡುವವನ
ಧರೆಯೊಳಧಿಕ ಕಲಿಪುರಮಠದ
ಗುರು ಕಲ್ಲಿದೇವನಾಗಿ ಉಲಿಯುವವನ  ||೩||

## ಬ್ರಹ್ಮವು ನೀನೆಲೊ

ರಾಗ : ಘೋರಕ ಕಲ್ಯಾಣಿ ತಾಲ : ದೀಪಚಂದಿ

ಬ್ರಹ್ಮವು ನೀನೆಲೊ । ಪರ । ಬ್ರಹ್ಮವು ನೀನೆಲೊ
ಬ್ರಹ್ಮವು ನೀನೆಂದು ನಂಬೆಲೊ ದೊರೆಯೆ ||ಪ||

ಕಣ್ಣಿನ ವ್ಯಾಪಾರ ಮೂಗಿನೊಳ್ಳಿಲ್ಲ
ಮೂಗಿನ ವ್ಯಾಪಾರ ಕಣ್ಣಿನೊಳಿಲ್ಲ
ನಿನ್ನ ವ್ಯಾಪಾರವು ಸಕಲವು ಎಲ್ಲಾ
ನಿನ್ನ ಹೊರತು ಬೇರೇನೂ ಇಲ್ಲ ||೧||

ಜಾಗ್ರುದ ವ್ಯಾಪಾರ ಸ್ವಪ್ನದೊಳಿಲ್ಲ
ಸಪ್ನದ ವ್ಯಾಪಾರ ಜಾಗ್ರುದೊಳಿಲ್ಲ
ಜಾಗ್ರು ಸ್ವಪ್ನಗಳೆರಡು ಸುಷುಪ್ತಿಯೊಳಿಲ್ಲ
ಸುಷುಪ್ತಿ ತೂರ್‍ಯಕೆ ಸಾಕ್ಷಿ ಎಲ್ಲಾ ನೀನೆ ||೨||

ನಾದದ ವ್ಯಾಪಾರ ಬಿಂದುವಿನೊಳಿಲ್ಲ
ಬಿಂದುವಿನ ವ್ಯಾಪಾರ ನಾದದೊಳಿಲ್ಲ
ನಾದಬಿಂದು ಕಳೆ ಮೂರಕ್ಕೂ ಇಲ್ಲ
ತಂದೆ ಕಲಿದೇವನ ಹೊರತು ಗತಿ ಬೇರಿಲ್ಲ ||೩||

## ದೇವರ ಇರವು

ರಾಗ : ಸುಗಂಧಿ ತಾಲ : ಖವಾಲಿ

ದೇವರ ಇರವು ಎಷ್ಟು ವಿಚಿತ್ರವು
ಭಾವದಂತೆ ಬಗೆಗೊಳುವವನ ಪಾತ್ರವು | ಪ||

ಭಕ್ತಿಯಲೆ ಕರೆದಾಗ ಬಲ್ಲೆ ಇರುವ
ಕುಯುಕ್ತಿಲೆ ನೆನೆದರೆ ಬಲು ದೂರಿರುವ
ಭಕ್ತರ ಬಾಗಿಲ ಕಾಯುತ್ತಲಿರುವನು
ಭುಕ್ತರು ಸತ್ತರೂ ನೋಡದಲೆ ಇರುವ ||೧||

ಇರಿವೆಯು ಹೆಜ್ಜೆಗೂ ಕಡಿವ್ಯಾಗಿ
ಅರಿವುಳ್ಳವರ ಧ್ವನಿಗೋ ಎನ್ನುವ
ಮರವುಳ್ಳವರು ಅರಚಿದರೇನು
ಹಿರಿ ಕಿವುಡಾಗಿ ಕುಳಿತುಕೊಳ್ಳುವ ||೨||

ನಲಿಯುವ ಮನವ ಆತನಿಗಿರಿಸಿ
ಒಲಿಸಲು ಹಾಡಿದರೆ ನಲಿನಲಿದಾಡಿ
ಕುಲುಕುಲು ನಗುತ ಓಡಿಬರುವ
ಕಲಿದೇವ ಗುರುಶಿವ ಹಂತ್ಯಾಕ ಇರುವ ||೩||

## ದೇವಿ ನಿನ್ನ

ರಾಗ : ಭೂಪ ತಾಲ : ಖವಾಲಿ

ದೇವಿ ನಿನ್ನ ಲೀಲ । ಕೊಂಡಾಡತೀನಿ ಭೂಮಿವ್ಯಾಲ
ಮೂಲೋಕಕೆ ಹಾಕಿದ ಜಾಲ । ವೀರರು ಶೂರರು
ಯಾರೂ ನಿನ್ನ ಗೆದ್ದಿಲ್ಲ ನೀನೇ ಮೇಲ ||ಪ||
ಮೊದಲಿಗೊಂದು ಬೀಜ
ಒಡೆದೆರಡಾಯ್ತು ಮಹಾತೇಜ
ಅದರೊಳು ಜನಿಸಿದ ಗುರುಮಹರಾಜ
ಆದಿಶಕ್ತಿ ದೇವಿ ನೀನಾ ಬೀಜ ||೧||
ಆಲಿಗೋಲಿಗೆ ಮಹಾಕಾಳಿ ನೀನೆ
ಐಲಿ ಕಡೆಗೆ ಗಂಡ್ರೂಪ ತಾಳಿದೆ
ತಾಳಿಯು ಶಾಸ್ತ್ರಕೆ ಸತಿಯಾಗಿ ಬಾಳ್ದೆ
ಲೀಲೆಗೊಂಡೆಯುವ್ವಾ ಜಗವ ತುಂಬೆ ||೨||
ಜಗದಂಬಾದೇವಿ ನಾನಿನ್ನ ಪುತ್ರ
ಹಗಲಿರುಳು ಮಾಡ್ತೀನಿ ನಿನ್ನ ಸ್ತೋತ್ರ
ಸುಗುರು ಕಲಿದೇವ ಕಲಿಸಿದ ಪಾತ್ರ
ಸೊಗದಿ ಮಾಡಿಸಿ ನೀ ಎತ್ತಿಕೋ ಮಾತಾ ||೩||

## ಗಂಡನ್ನ ಮಾಡಿಕೊಂಡೆ

ರಾಗ : ಭೂಪ ತಾಲ : ದೀಪಚಂದಿ

ಗಂಡನ್ನ ಮಾಡಿಕೊಂಡೆ । ನಾ
ಮುಪ್ಪಾಗದಂಥ ಮುತ್ತೈದಿತನವ ಕಂಡೆ ||ಪ||

ಗಂಡನಿಲ್ಲದಕಿಂತ ಮೊದಲು ರಂಡಿಯಂಗ ತಿರಗತಿದ್ದೆ
ಗಂಡಬಂದು ಎನ್ನ ಕೊರಳಿಗೆ ಗಂಡುಮುದ್ರೆಯ ಧರಿಸಿಬಿಟ್ಟ ||ಅ.ಪ||
ಸಣ್ಣ ವಯಪಾಕಿ ನಾಯಿದ್ದೆ
ಸಣ್ಣಗುಣದೆ ಅರಿಯದಲೆ ವೈಯನಾ ನೆರೆದೆ
ಚೆನ್ನನೆಳೆದು ಇರುವವರೊಳು
ಗಂಡನೊಲುಮೆಯು ಆದರಾಯಿತು
ಬೆಂಡುವೊರೆದರೆನ್ನ ಬಾಳ್ವೆಯು ಬಂಡುತನ ನೋಡೆನಮ್ಮ ||೧||
ಕಣ್ಣಸನ್ನೆಯೊಳು ಒಳಕರೆದ
ಉನ್ಮನಿಯೋಳು ಹೊಗಿಸಿ ಮುಚ್ಚಿ ಅನುಗ್ರಹದ
ತಣಿಯಲೆಂದು ಎನ್ನನೆಳೆದು
ಅನುವಿಲಾಸನದಲ್ಲಿ ಮಲಗಿಸಿ
ನೆನೆವ ಜಿಹ್ವೆಯು ಶಿಶ್ನದಲ್ಲಿ ಪ್ರಣವ ಬೀಜದ ಭೋಗಕೊಟ್ಟ
ಕರ್ಣ ಗರ್ಭಿಣಿಯನ್ನ ಮಾಡೆ
ಓಂಕಾರ ಬ್ರಹ್ಮ ಹಡದೀನೋ ಜಗವು ನಲಿದಾಡೆ
ನಂದ ಹುಟ್ಟಿದನೆಂಬ ಪ್ರೀತಿಲಿ
ಬಾನ ತೊಟ್ಟಿಲ ಕಟ್ಟಿತೂಗಿ
ಹೆಂಗಳೆಯರು ಲಾಲಿಪಾಡಿ ಕಲಿದೇವ ಹೆಸರಿಟ್ಟರು ||೩||

## ತಂಗಿ ಕೇಳವ್ವಾ

ರಾಗ : ಮಾಲಕಂಸ ತಾಲ : ದಾದರಾ

ತಂಗಿ ಕೇಳವ್ವ | ಗುರು | ಮಂಗಲಾತ್ಮನ ಮಹಿಮ
ಲಿಂಗದೊಳಗಿನ ಪ್ರಾಣಭಾವಲಿಂಗಂಗೈಗೆ
ಇಷ್ಟಲಿಂಗವಾಗಿ ಇತ್ತವನವ್ವ ||ಪ||
ಗೌರೀರಮಣನು ಈತ | ಗಂಗೀರಮಣನೂ ಈತ
ಚರಪಟ್ಟದ ಜಂಗಮ ಲಿಂಗ ಇವನವ್ವಾ
ಆಕಾರ ರಹಿತನು | ಸಾಕಾರಗೊಂಡಿಹನು
ಮುಕ್ಕಣ್ಣ ನಮಗೆಲ್ಲ ಹೀಗೆ ತೋರಿದನು ||೧||

ಶಿರದಗ್ರು ಸಂಪತ್ತು । ಕರಬುಗ್ಗೆ ಈ ಹೊತ್ತು.
ಗುರು ಲೀಲೆ ಮಾಡಿದನು ತಂಗಿ ನೋಡಮ್ಮಾ
ಜಾಗ್ರುದೊಳಿರುವನು । ಸ್ವಪ್ನದೊಳಿರುವನು
ಸುಷುಪ್ತಿಯೊಳಗ ಮುಳಿಗೇಳುವನಮ್ಮಾ ॥೨॥
ಕೀಡಿ ಭ್ರುಮರವ ಮುಟ್ಟಿ । ಮಾಡುವದು ಪ್ರತಿಸೃಷ್ಟಿ
ಸದ್ಗುರು ಎನ್ನ ತನ್ನಂತೆ ಮಾಡಿದನಮ್ಮಾ
ಪರಲೋಕಕ್ಕಿರಿಸಲು । ಇಹಗತಿಯ ಬಿಡಿಸಿದನು
ಗುರು ಕಲ್ಲಿದೇವ ಶಿವನುದ್ಧರಿಸಿದನಮ್ಮಾ ○ ॥೩॥

## ಜರೆ ಮರಣದ

ರಾಗ : ಭಾಗೇಶ್ರೀ ತಾಲ : ದಾದರಾ

ಜರೆ ಮರಣದ ಜನ್ಮ ಇದಕೆ ಬುದ್ಧಿ ಇಲ್ಲ
ಗುರುಬೋಧಾಮೃತವನ್ನು ಶುದ್ಧ ಕುಡೀಲಿಲ್ಲ ॥ಪ॥
ಹದ್ದಿನಷ್ಟ ಆಯುಷ್ಯ ಇದು ಪಡೆಯಿತಲ್ಲ
ಕದ್ದು ಒಂದಿನ ಅಡಗುವ ಜನ್ಮ ನೆಚ್ಚಿಕಿಲ್ಲ ॥ಅ ಪ॥
ಹಿಂದೆ ಹಲವು ಜನ್ಮ ತಿರುಗಿ ಬಂದಿತಲ್ಲ
ಮುಂದೆ ಹೋಗುವಂಥೆ ಮಾರ್ಗಗೊತ್ತಿ ಇಲ್ಲ
ನಂದುನಂದು ಎಂಬುವ ಭ್ರಾಂತಿ ಹಿಡಿದೀತಲ್ಲ
ಒಂದಿನ ನಂದೆಂಬುವದೆಲ್ಲ ಬಿಟ್ಟು ನಡೆದೀತಲ್ಲ ॥೧॥
ಎಷ್ಟು ದಿವಸ ಇದ್ದರೂ ಸಾವು ಬಿಟ್ಟಿದ್ದಲ್ಲ
ಸತ್ತುಹೋಗುವದು ಘಟ್ಟಯೆಂಬುದು ನೆನಪಿಲ್ಲ
ಅಪ್ಪ ಅವ್ವ ಅಣ್ಣ ತಮ್ಮ ಬಂಧು ಬಳಗವೆಲ್ಲ
ಅಪ್ಪಿಕೊಂಡು ಅತ್ತರೇನು ನಿನ್ನ ವುಳಿಸಲಿಲ್ಲ ॥೨॥
ಎಲ್ಲ ಸುಳ್ಳು ಒಂದೇ ನಿಜವು ತಿಳಿಯೋ ಬಯಲ ಇದರ
ಮೂಲ ತಿಳಿಸುವಂಥೆ ಶ್ರೀ ಗುರುವಿನ ಹೊಂದಲಿಲ್ಲ
ಕಲ್ಲಿದೇವ ಗುರು ತೋರಿಸಿದನು ಭಾವಕೀಲ.
ಮೊಲ್ಲೊಬಾ ಗುರು ವಚನ ಸವಿದಂಗ ಸಕ್ಕರಿ ಹಾಲ ○ ॥೩॥

## ಎಂಥಾ ಮಾನುಷ

ರಾಗ : ತಿಲಕಾಮೋದ ತಾಲ : ಖವಾಲಿ

ಎಂಥಾ ಮಾನುಷ ಜನ್ಮ ಪಡೆದು ಬಂದೀರಪ್ಪಾನೀವು
ಮಾಂತ ಶಿವನ ಧ್ಯಾನ ಮಾಡಿರಪ್ಪಯ್ಯಾ ||ಪ||

ಅಂತು ಗೊಂತಿಲ್ಲದ | ಸಂತೆ ಸಂಸಾರದಿ
ಮುಂತು ಗಾಣದೆ ಕುಂತು ಬಿಟ್ಟೆರಪ್ಪಯ್ಯಾ ||೧||

ಹೆಣ್ಣು ಹೊನ್ನು ಮಣ್ಣು | ಬೆನ್ನ ಹತ್ತಿ ನೀವು
ಸಣ್ಣಾಗಿ ಮಣ್ಣು ತಿನ್ನಬೇಡಿರಪ್ಪಯ್ಯಾ ||೨|

ಕಲಿಯುಗದಲಿ ವಿಲಿ | ವಿಲಿ ಎನ್ನದೆ ನೀವು
ಕಲಿಗೇವರ ಪಾದಕ್ಕೊಲಿಯಿರಪ್ಪಯ್ಯಾ ○ ||೩||

## ಎಲ್ಲಿಹಾನ ಪರಮಾತ್ಮ

ರಾಗ : ಪಹಡಿ ತಾಲ : ಖವಾಲಿ

ಎಲ್ಲಿಹಾನ ಪರಮಾತ್ಮ ಎಲ್ಲಿಹಾನ
ಬಲ್ಲಂಥ ಜ್ಞಾನಿಗಳ ಬಲ್ಲೆಹಾನ ||ಪ||

ಚಂದದಿ ನಂದೀ ಏರ್ಯಾನ | ಸುಂದರ ಕಂತೀಯು ಧರಿಸ್ಯಾನ
ಕಂದನಾಗಿ ಮೊಲೆ ಸವಿದಾನ | ದೇವೇಂದ್ರಗ ಪದವಿ ಕೊಟ್ಟಾನ ||೧||

ಜಡದೇಹಕವ ದೂರಾನ | ಜಡಿಯೊಳು ಗಂಗಾನ ಧರಿಸ್ಯಾನ
ದೃಢಭಕ್ತಿಯಿದ್ದವರ ನೋಡ್ತಾನ | ಕಡೀತನಕವರನ್ನು ಕಾಯ್ತಾನ ||೨||

ಪೃಥ್ವಿಗೆ ಮೊದಲ ಬೀಜ ಬಿತ್ತ್ಯಾನ | ಸರಂಕ್ಷಣ ಬೇರ್ಬೇರೆ ಇಟ್ಟಾನ
ಖುಲ್ಲ ಮಾನವರೆಲ್ಲ ಗಿಲ್ಲ ಮಾಡುವದು ಕಂಡು| ಕಲ್ಲಿನಕಿಂತ ಕಲ್ಲಾಗ್ಯಾನ||೩||

ಅಜಹರಿಗಳಿಗವ ಅರಿವಾನ | ಗಜಮುಖ ಶಿರವ ಹಡದಾನ
ನಿಜರೂಪ ತಾಳಿ ಬರ್ತಾನ | ತಿಂಥಿಣಿ ಮಠದಾಗ ಮೌನ್ಯಾನ ○ ||೪||

— ತಿಂಥಿಣಿ ಮೌನಪ್ಪಯ್ಯ.

# ಏನಾಗತಾದೊ

ರಾಗ : ಗೌತಿ ತಾಲ : ದಾದರಾ

ಏನಾಗತಾದೊ | ಎಂತಾಗತಾದೊ
ಈ ನಾಡ ನೀ ನೋಡ ತಮ್ಮಾ ||ಪ||

ದುಡಿದುಣ್ಣುವ ರೈತರಿಗೆ ಏಸಿಲ್ಲ ರೊಕ್ಕ
ದುಡಿಯದ ಬಂಟರಿಗೆ ಏನೆಲ್ಲ ಬಿಂಕ
ದುಡಿಸಿಕೊಳ್ಳುವ ಜನಕೆ ಭಾರೀ ಸೊಕ್ಕ
ಅಂಥವರೆ ಆಳಾಕ ಬರತಾರ ದೇಶಕ್ಕ ||೧||

ಪರಮ ಪತಿವ್ರತಾ ಕರ್ಮ ಹೊಲಸಾಗತಾದೊ
ಭರದಿ ಹೆಂಡತಿಗೆರಗುವ ಗಂಡಹುಟ್ಟತಾನೊ
ಹಿರಿಯರಿಲ್ಲದ ಮದುವಿ ಸುರುವಾಗತಾವೊ
ಸೀರಿ ತಾಳಿ ಮೂಗುತಿ ಮರೆಯಾಗತಾವೊ ||೨||

ಆಳುವವರ ಕಣ್ಣನ್ನೆ ಕೀಳವವರು ಬರತಾರೊ
ನಲಿದು ದುಡಿಯುವವರ ಕೈ ಕಡಿವ ಸರತಿ ಬರ್ತಾದೊ
ಸುಳ್ಳು ಹೇಳುವವರು ಸತ್ಯಸಂಧರಾಗಿ ಮೆರಿತಾರೊ
ಕಳ್ಳರೆಲ್ಲ ಕೂಡಿ ನಾಡನಾಳ್ವ ಸರತಿ ಬರತಾದೊ ||೩||

ಯೋಗಿಪೀಠದಲ್ಲಿ ಭೋಗಪಾಠ ನಡೀತಾದೊ
ಭೋಗಿ ಜನರ ಕೈಯಲ್ಲಿ ಯೋಗಿ ಕುಣಿದು ಮೆರಿತಾನೊ
ಯೋಗ ತ್ಯಾಗ ದಾನ ಧ್ಯಾನ ಗೆಯ್ಯದವರು ಬರುತಾರೊ
ಅಂಥವರಿಗೆ ಗುರುಪಟ್ಟ ಒಲಿದು ತಾನಳತಾದೊ ||೪||

ದಡ್ಡರೆಲ್ಲ ದೊಡ್ಡತತ್ವ ಹೇಳಲು ಬರತಾರೊ
ದುಡ್ಡವರೆಲ್ಲ ದೊಡ್ಡ ಜಾಗಾ ಬಳಸಿ ಮೆರಿತಾರೊ
ದೊಡ್ಡಗುಣದ ಹಿರಿಯರೆಲ್ಲ ಮೂಲೆ ಹಿಡಿದು ಕೂಡ್ರುತಾರೊ
ಗುಡ್ಡದ ಮಹಾಂತೇಶ ಅದನೆಲ್ಲ ನೋಡಿ ನಗತಾನೊ ||೫||

— ಕಡಕೋಳ ಮಡಿವಾಳಪ್ಪ.

# ಎಂಥ ಆಕಳ

ರಾಗ : ಮಿಶ್ರ

ತಾಲ : ಖವಾಲಿ

ಎಂಥ ಆಕಳ ಕೊಟ್ಟ ಗುರುರಾಯ ಕಾಮಧೇನು
ಇಂಥ ಆಕಳನ ನೋಡಿದ್ದಿಲ್ಲ ನಾನು ||ಪ||

ಹಗಲು ಇರುಳು ಹಾಲ್ಗರೆಯುವದೊಂದೆ ಸವನ
ಶ್ರೀಗುರುರಾಯ ಕೊಟ್ಟ ಅಮೃತ ಪಾನ
ಉಂಡು ನೋಡಿದವನೆ ಬಲ್ಲ ಇದರ ಹೈನ
ಬೆಲೆ ಮಾಡ್ವರಿಲ್ಲಪ್ಪ ಇದರ ಸಮಾನ ||೧||

ಬಹಳ ದಿನದಾಕಳು ಹಳೆ ಮುದುಕಿ
ಮಾಡುತ ಬಂದೀನಿ ಅದರ ಜ್ವಾಕಿ
ಹಿಡಿದೇನಂದರೆ ಸಿಗುವದಿಲ್ಲ ಬಾಳಬೆರಿಕಿ
ಅದಕ ನನಗಾಗಬೇಕು ಸರಬೆರಿಕಿ ||೨||

ಬಾಯಿ ನೋಡಿದರೆ ಒಂದು ಹಲ್ಲಿಲ್ಲ
ಗುಡ್ಡದಷ್ಟು ಹುಲ್ಲದಕೆ ಸಾಲುವದಿಲ್ಲ
ಅಷ್ಟು ತಿಂದರೂ ಅದಕೆ ಹೊಟ್ಟೆತುಂಬಿಲ್ಲ
ನೀರ ಕುಡಿಯುವ ರಾಟಿ ಅದಕೆ ಮೊದಲಿಲ್ಲಾ ||೩||

ಆಕಳಿರುವದು ಶಿವಪುರದಲ್ಲಿ
ಬಲ್ಲವರಿಗೆ ತಿಳಿದಾದಪ್ಪ ಅದರ ನೆಲಿ
ಆಕಳಿಗದಾವಪ್ಪ ಸಾವಿರ ಮೊಲಿ
ಮಹಾಂತನ ಹೆಸರಲಿ ಬಿಟ್ಟೇನಿ ಕಪಲಿ ||೪||

— ಕಡಕೋಳ ಮಡಿವಾಳಪ್ಪ

# ಫಕೀರ

ರಾಗ : ಮಿಶ್ರಪೀಲೂ ತಾಲ : ಖವಾಲಿ

ಫಕೀರನಾಗಬೇಕಾದರೆ ನೀಮನ
ದಿಃಕಾರ ಮಾಡಿಕೊಂಡಿರಬೇಕು
ನಕಾರಮಕಾರ ಶಿಕಾರ ವಕಾರ ಯಃಕಾರ ಓಂಕಾರ ತಿಳಿದಿರಬೇಕು ಪ।

ಹಶಿವು ತೃಷೆಗಳಾದಿ ಅಳಿದಿರಬೇಕು । ಮನವ
ಹಸನ ಮಾಡಿಕೊಂಡಿರಬೇಕು
ತುಸು ಮಾತ್ರ ನಿನ್ನಸು ಮಾಸದಿರಬೇಕು
ಖಾಸ ಮುಸಲ್ಮಾನನಾಗಿರಬೇಕು ||೧||

ಸುತರೆಂಬ ಮೋಹದ ಮಡಕೆಯು ಪಿಡಿದು
ಗತಿಯಿಂದ ಅತಿಸಿರಿ ಪುಳಿಸಿರಬೇಕು
ಕೃತ ಕೂದಲಗಳ ಮೊದಲು ನೀನಳಿದು
ಸಮತೆಯೆಂಬ ಗಡ್ಡ ಬೆಳಿಸಿರಬೇಕು ||೨||

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ
ತಾಮಸ ಗುಣಗಳ ತಿಳಿದಿರಬೇಕು
ನಾಮ ಸೀಮೆಗಳ ಮುಟ್ಟೆನೆಂಬ ದೃಢ
ನೇಮದ ಲುಂಗಿಯು ಉಟ್ಟಿರಬೇಕು ||೩||

ಸಾಕು ಬೇಕು ಎರಡೇಕ ಮಾಡಿಕೊಂಡು
ಠೀಕನಾಗಿ ಕೋಲು ಹಿಡಿದಿರಬೇಕು
ಲೋಕದೊಳಗೆ ತಾ ಮೂಕನಾಗಿ ಬಲು
ಜೋಕಿಲೆ ಮನೆಮನೆ ನಡೆದಿರಬೇಕು ||೪||

ಸತ್ಯವನುಳಿದು ಅಸತ್ಯವನಳಿದು
ಕತ್ತಲ್ ರಾತ್ರಿಯು ಮಾಡಿರಬೇಕು
ಜಿತಾಪೀರ ಮಹಾಂತೇಶನ ಭಜಿಸುತ
ನಿತ್ಯದೆ ಅಲಾಯಿ ಆಡಿರಬೇಕು ||೫||

— ಕಡಕೋಳ ಮಡಿವಾಳಪ್ಪ.

# ಮುಡಚೆಟ್ಟನೊಳು

ರಾಗ : ನಟ್‌ಭೈರವ

ತಾಲ : ದಾದರ

ಮುಡಚೆಟ್ಟನೊಳು ಬಂದು । ವೈಲಿಗೆ
ಮುಡಚೆಟ್ಟನೊಳು ಬಂದು । ಮುಟ್ಟತಟ್ಟ ಅಂತೀರಿ ?
ಮುಡಚೆಟ್ಟು ಎಲ್ಲ್ಯಾದ ಹೇಳಣ್ಣ ?
ಮುಟ್ಟು ವೈಲಿಗೆಯಲ್ಲಿ ಹುಟ್ಟಬಂದೀರಿ ನೀವು ॥ಪ॥

ಎಲವಿನಾಲಯದೊಳು । ಒಳಹೊಕ್ಕು ನೀ ಕುಂತು
ಓಡ್ಯಾಡಬೇಡ ನೀ ಕೇಳಣ್ಣ
ಎಲವು ತೊಗಲು ಮಲಮೂತ್ರ ಮಾಸಂವು
ನಿನ್ನಲ್ಲಿ ಕಾಣುತಾದಣ್ಣ । ಮುಡಚೆಟ್ಟು ಎಲ್ಲ್ಯಾದ ? ॥೧॥

ಊರಹೊಲಸನೆ ತಿಂದು । ಬೋರ‍್ಯಾಡಿ ಹಿಂಡುವ ಎಮ್ಮಿ
ಹಾಲೀನ ಸವಿಯು ನೋಡಣ್ಣ
ಆದರಸ್ವಾದ ನೀವುಂಡು । ಗುಂಡಾಗಿ ಕುಂತೀದಿ
ಶೀಲ ಎಲ್ಲಿ ವುಳಿಯಿತ್ತೇಳಣ್ಣಾ । ಮುಡಚೆಟ್ಟು ॥೨॥

ಊರಭಾವಿಯ ನೀರ । ಯಾರಾದರು ತರುವರು
ನಿಮ್ಮ ನೀರ ಬ್ಯಾರೆ ಆವೇನಣ್ಣಾ
ಲಂಡೇನ್ಹಳ್ಳ ಹೋಗಿ ನದಿಯು ಕೂಡಿದ ವ್ಯಾಲ
ನೈವೇದ್ಯಕ್ಕೇಗಾದಾವು ಹೇಳಣ್ಣ । ಮುಡಚೆಟ್ಟು ॥೩॥

ಸೂಸಲಾಡುವ ದೇಹ । ಸೋಸಿ ನೀರವ ಮಾಡಿ
ಮಡಿಮಾಡಿಕೊಳಬೇಕಣ್ಣ !
ಧೀರ ಮಹಾಂತೇಶನ ಬಿಡದೆ ಕೊಂಡಾಡಿದರೆ
ಕಡಿತನಕ ಮಡಿಯಾಗತಾದಣ್ಣ ॥೪॥

## ತನ್ನ ತಾ

ರಾಗ : ಮಿಶ್ರ ತಾಲ : ಖವಾಲಿ

ತನ್ನತಾ ತಿಳಿದ ಮೇಲೆ ಇನ್ನೇನಿನ್ನೆನಿನ್ನೇನು
ತನ್ನಂತೆ ಸರ್ವರಜೀವ ಮನ್ನಿಸಿ ಮೂಕಾದ ಮೇಲೆ |ಪ||

ತಾನೆಪೃಥ್ವಿ ಅಪ್ಪುತೇಜ | ತಾನೆ ವಾಯು ಆಕಾಶಾತ್ಮ
ತಾನೆಸೂರ್ಯಚಂದ್ರತಾರ | ತಾನೆ ಬ್ರಹ್ಮಾಂಡಾದ ಮೇಲೆ ||೧||

ತಾನೆಘ್ರಾಣ ಜಿಹ್ವೆನೇತ್ರ | ತಾನೆತ್ವಕ್ಕುಶ್ರೋತ್ರುಹೃದಯ
ತಾನೆ ಕಾಯು ಕರಣ ಹರಣ | ತಾನೆ ಪಿಂಡಾಂಡಾದ ಮೇಲೆ ||೨||

ತಾನೆ ಚಿತ್ತಸತ್ತಅತ್ತ | ತಾನೆ ನುತ್ಯ ಸತ್ಯ
ತಾನೆ ಆರ್ತ ಬೆರ್ತಮರ್ತ | ತಾನೆ ಸರ್ವನಾದ ಮೇಲೆ ||೩||

ತಾನೆ ಲಕ್ಷಸಾವಿರನೂರು | ತಾನೆ ಹತ್ತೊಂಭತ್ತೆಂಟೇಳು
ತಾನೆ ಆರೈದು ನಾಲ್ಕು ಮೂರು | ತಾನೆ ಎರಡೊಂದಾದ ಮೇಲೆ ||೪||

ತಾನೆ ನೀನು ನೀನೆತಾನು | ತಾನೆ ಇಲ್ಲ ತಾನೆ ಅಲ್ಲ
ತಾನೆ ಮಹಾಂತ ತಾನೆತಾನು | ಏನೊ ಏನೊಂದಾದ ಮೇಲೆ ||೫||

– ಕಡಕೋಳ ಮಡಿವಾಳಪ್ಪ.

## ಗಂಡಗಂಜಿ

ರಾಗ : ಮಿಶ್ರನಾರಾಯಣಿ ತಾಲ : ದೀಪಚಂದಿ

ಗಂಡಗಂಜಿ ಬದುಕ ಮಾಡಮ್ಮ
ಗಂಡನಿತ್ತ ಮುತ್ತೈದಿತನವ ಕಳಕೊಬೇಡಮ್ಮ
ತಿಳಕೋ ತಂಗೆಮ್ಮ | ಚೆಂದುಳ್ಳ ಚನ್ನೆ ||ಪ|

ಗಂಡಗಂಜಿ ಬದುಕಮಾಡ | ಅನ್ಯಪುರುಷರ ಸಂಗಬ್ಯಾಡ
ಗಂಡಬಿಟ್ಟ ಗಯ್ಯಾಳಿಹಾಂಗ ತಿರುಗಬ್ಯಾಡಮ್ಮ ||ಅ. ಪ||

ಊರ ಗೌಡರು ಪುೂವರಾರವ್ಮ । ಊರ ಸುದ್ದಿ ಬರಿಯತಾರವ್ಮ
ಯಾರು ತಪ್ಪು ಮಾಡಿದರೆ ಪಾರದೊಳಗೆ ಹಾಕತಾರ
ದಾರಿತಪ್ಪಿ ನಡಿಯುಬ್ಯಾಡವ್ಮ । ಗೌರವದ ಮುತ್ತು ಜನತ
ಇಟ್ಟುಕೊಳ್ಳವ್ಮ ॥೧॥

ಆರುಭಾಗಿಲ ಮುಚ್ಚಿಮರಿಯು । ಆರೂ ಅರಿಯದಂತೆ ಒಳಮನೆಯು
ಸೇರಿ ಅಂತರಂಗ ತೊಳೆದು । ಮೂರುಬಣ್ಣದ ಸೀರೆಯುಟ್ಟು
ಝುಂಠಾರಿ ಕುಪ್ಪಸತೊಡುವವ್ಮ । ಕೇಳ್ ತಂಗಿಬಾರು ಮೂಗುತಿ
ಇಟ್ಟು ಮೆರಿಯುವ್ಮ ॥೨॥

ಒಲಿದು ಮಹಡಿ ಮನೀ ತೆರಿಯುವ್ಮ
ತೊಳಗಿ ಬೆಳಗುವ ಜ್ಯೋತಿ ಕಾಣವ್ಮ
ಮಲಿನ ಮಾಯಾ ಕರ್ಮಂಗಳ । ಹೊಲಸು ಕತ್ತಲೆಯಿಲ್ಲ ಅಲ್ಲಿ
ತಿಳಿದು ಮರೆತು ನೀನು ಮಲಗವ್ಮ । ಮಡಿವಾಳ ಪತಿಗೂಡಿ
ಲೀನಳಾಗವ್ಮ ॥೩॥

— ಕಡಕೋಳ ಮಡಿವಾಳಪ್ಪ.

## ಜೇಡರ ದಾಸ

ರಾಗ : ಸಾರಂಗ ತಾಲ : ಖವಾಲಿ

ಜೇಡರ ದಾಸ ಕಲಿದೇವರದಾಸ
ಮುದ್ನೂರು ನಿವಾಸ ಶಿವದಾಸ ॥೧॥
ನೋಡು ಈಶ ಧರ್ಮಪ್ರಕಾಶ
ಶಿವಶರಣರ ಗುರು ಅವಿನಾಶ ॥ಅ ಪ॥

ಸತ್ವ ರಜೋ ತಮ ಗುಣ ಮೂರುಬಣ್ಣ
ಹತ್ತಿಪಾ ಸೀಳನು ತಂದಿದ್ದನಣ್ಣಾ । ಅವ
ಸಪ್ತ ವ್ಯಸನದ ಗಂಜೀ ಕಗ್ಗಂಟಂ
ಮತ್ತ ಕತ್ತರಿಸಿ ಬಿಟ್ಟಿದ್ದನಣ್ಣಾ ॥೧॥

ಚಿತ್ತ ಮನ ಬುದ್ಧಿ ಅಹಂಕಾರ ಕರಣ
ಚತುಷ್ಟಿ ಎಂಬ ಗೂಟ ನೆಟ್ಟಿದ್ದನಣ್ಣ
ಮತ್ತಾರು ವರ್ಣದ ಮಗ್ಗವ ತಂದಿದ್ದ
ಸುತ್ತಿಸುತ್ತಿ ಲಾಳಿ ಒಗೆದಿದ್ದನಣ್ಣಾ ॥೨॥

ಮುದದಿ ನವನಾಡಿಯೋಳ್ ಎರಡಕಂಬಿ
ಹದಿನೆಂಟು ಪಿರಿಕಿಯು ತಿರುವಿದ್ದನಣ್ಣ
ಬಿದಿಯೊಳಾಡುವ ವಿಷಯದ ಎಳೆಗಳ
ಹದವರಿತು ಬಿಗಿದು ಕಟ್ಟಿದ್ದನಣ್ಣಾ ॥೩॥

ಮುನ್ನ ಮುವತ್ತಾರು ತತ್ವಗಳ ಮತ್ತ
ಇನ್ನೂರು ಹದಿನಾರು ಕೀಲಗಳ ಎಣ್ಣಾ
ಚನ್ನಾಗಿ ಸಾಧಿಸಿ ನೂರೊಂದು ಸ್ಥಲಗಳ
ಉನ್ನತದ ಅಣಿಯು ಕಿತ್ತಿದ್ದನಣ್ಣಾ ॥೪॥

ತನು ಮನಧನ ಗುರುಲಿಂಗ ಚರಕ
ಇನಯುಡೊಳರ್ಪಿಸಿ ಇರತಿದ್ದನಣ್ಣಾ । ಅವ
ಚಿನುಮಯ ಶಿವಪ್ರಸಾದ ಸವಿದುಂಡು
ಘನಲಿಂಗ ಭಕ್ತಿಯು ಮೆರೆದಿದ್ದನಣ್ಣಾ ॥೫॥

ರಂಜನದಿಂದಲಿ ಜಂಗಮ ಜನರಿಗೆ
ಗಂಜೀಯ ದಾಸೋಹ ನಡೆಸಿದ್ದನಣ್ಣಾ
ಜಂಜರ ಭಂಡ ಮಾಯಾ ಪಾಶ ಹರಿವ
ಹಂಚೀಕಿ ಕಾಯಕದಿ ನಡೆಸಿದನಣ್ಣಾ ॥೬॥

ನಾನೆಂಬ ಅಹಂಕಾರ ಅಳಿದುಳಿದು ಸತ್ಯ
ಜ್ಞಾನದ ರೂಪಾಗಿ ಬಾಳಿದ್ದನಣ್ಣಾ । ಅವ
ಜ್ಞಾನಪೂರ್ಣಂ ಜ್ಯೋತಿ ಕೂಡಲೂರೇಶನ
ಸಾನುರಾಗದ ಪಾದ ನಂಬಿದ್ದನಣ್ಣಾ ॥೭॥

— ಕೂಡಲೂರ ಬಸವಲಿಂಗ.

# ಖೋಡಿ

ರಾಗ : ಭೀಮಪಲ್ಲಾಸ

ತಾಲ : ಖವಾಲಿ

ಖೋಡಿ ಎಲೆ ಖೋಡಿ । ಆದಿಅನಾದಿ ಅಭೇದವು
-ನೀನಾದಿ ಇದ ನೀ ಮರೆತಾದಿ ಕಳಗೇಡಿ ॥ಪ॥

ಉಚ್ಚ ನೀಚೆನ್ನತೀದಿ ಹುಚ್ಚನಾಯಿ
ಉಚ್ಚಿಯೊಳು ಬಂದೀದಿ ಉಚಿಬಾಯಿ
ಮುಟ್ಟಿತಟ್ಟಿ ಅಂತೀದಿ ಮಂಡಕೋಡಿ
ಮುಡಚಿಟ್ಟಿನೊಳ್ ಬೆಳೆದಿ ವ ರವುಗೇಡಿ ॥೧॥

ಕುಲಕುಲ ಅಂತೀದಿ ಕುಲಗೇಡಿ
ಕುಲದ ಕೂನ ಹೇಳು ನಿಜನೋಡಿ
ಕೆಳಗೆಂದು ಮೇಲೆಂದು ಹಾರಾಡತೀದಿ
ನಾವೆಲ್ಲರು ಒಂದರಿಯೋ ತಿಳಿಗೇಡಿ ॥೨॥

ಬ್ರಹ್ಮ ನಾನೆನ್ನತೀದಿ ಭ್ರಮಿಗೇಡಿ
ಬ್ರಹ್ಮವ ಬೊಗಳ್ತೀದಿ ದಿಟಗೇಡಿ
ಹಮ್ಮೊಳು ಬಿದ್ದು ಪರಾಟಿ ಸಾಯ್ತೀದಿ
ಸುಮ್ಮ್ಸುಮ್ನೆ ವೇದಾಂತವ ಹೇಳ್ತೀದಿ ॥೩॥

ಸಾಧೊರಾಟ ಆಡಬ್ಯಾಡ ಸೋಗಲಾಡಿ
ಹಾದಿಬಿಟ್ಟು ನಡಿಬ್ಯಾಡ ಹಡಗೇಡಿ
ಆದಿಗುರು ಪದವಿಡಿ ನಿಜನೋಡಿ
ಗುರುಬೋಧದಿ ಬೆರೆತು ಶಿವನಾಗು ॥೪॥

ಲಿಂಗ ಕಲ್ಲೆನಬೇಡ ಕುದ್ದಲ್‌ಗೇಡಿ
ಜಂಗಮನ ಜರಿಬೇಡ ಜುಂಗಲಾಡಿ
ಲಿಂಗವಕೊಟ್ಟ ಮಹಾಂತ ಗುರುವಿನಡಿ
ನೀನಂಗಲಾಚಿ ಭಜಿಸಿ ಮುಕ್ತಿಪಡಿ ॥೫॥

— ಕಡಕೋಳ ಮಡಿವಾಳಪ್ಪ

# ಗಡಿಗಿ ತೊಳೆದು

ರಾಗ : ತಿಲಂಗ ತಾಲ : ದೀಪಚಂದಿ

ಗಡಿಗಿ ತೊಳೆದು ಅಡಿಗಿ ಮಾಡಮ್ಮ। ತನು
ಗಡಿಗಿ ತೊಳೆದು ಅಡಗಿ ಮಾಡಮ್ಮ। ಅನುಭವ
ದಡಿಗೆ ಮಾಡಿ ಎಡಿಯು ಮಾಡಮ್ಮ। ದೇವರಿ
ಗೆಡಿಯು ಮಾಡಿ ಗಂಡಗ ಉಣಿಸಮ್ಮಾ ॥ಪ॥

ಕರ್ಮವೆಂಬ ಜೋಳ ಬೀಸವ್ವ ನೀ
ಧರ್ಮವೆಂಬ ಜಲ್ಡಿಯಿಂದ ಹಿಟ್ಟಸೋಸವ್ವ
ನಿರ್ಮಲಾತ್ಮ ನೀರ ಹಾಕವ್ವ ತಂಗಿ
ನೇಮದಿಂದ ಕಣಕ ನಾದಮ್ಮ ॥೧॥

ಗುರು ಲಿಂಗ ಜಂಗಮ ಮೂರವ್ವ
ಪರಮ ಸಾಕ್ಷಿ ಒಲಿಗುಂಡ ಹೂಡವ್ವ
ಪರಿಪರಿ ಕಷ್ಟಗಳ ಕಾಷ್ಟ ಸುಡವ್ವ
ಹರಿದಾಡುವ ಮನಸನಿಟ್ಟು ಕೂಡ್ರವ್ವ ॥೨॥

ಸಂಚಿತ ಕರ್ಮದ ಹಂಚು ನಿಂದವ್ವ
ಮುಂಚೀಲೆದ್ದು ಸ್ವಚ್ಛವಾಗಿ ತೊಳಿಯವ್ವ
ಹಂಚಿಕಿಂದ ಜ್ಞಾನದಗ್ನಿ ಉರಿಸವ್ವ ನೀ
ಸಂಚಿನಿಂದ ಪರ ರೊಟ್ಟಿ ಬೇಸವ್ವ ॥೩॥

ಭಕ್ತಿಯೆಂಬ ಬತ್ತ ಕುಟ್ಟವ್ವ ತಂಗಿ
ಘಟ್ಟಿಅಕ್ಕೀ ಹಿಡಿದು ಹೊಟ್ಟ ತೆಗಿಯವ್ವ
ನಿಷ್ಠೆಯನ್ನವ ಮಾಡಿ ಚರಪತಿಗುಣಿಸು
ಶ್ರೇಷ್ಠ ಮಹಾಂತೇಶಗೊಲಿದು ಮುಕ್ತಿಪಡಿ ॥೪॥

– ಕಡಕೋಳ ಮಡಿವಾಳಪ್ಪ.

# ಹೊರಸೊಂದ

ರಾಗ : ಕಾಪಿ

ತಾಲ : ದೀಪಚಂದಿ

ಹೊರಸೊಂದ ಹೆಣೆದೇನ ತಂಗಿ । ನಾ
ಗುರುವಿಗೆ ಪವಡಿಸಲು ಹೊರಸ ಹೆಣೆದು ಹಾಕಿದೆನು ॥ಪ॥

ಚತುರ್‌ದಿಕ್ಕು ಸಾಗೋನಿ ಅಂದದ ಚೌಕಟ್ಟು
ಚತುರತನದಲಿ ಗೈದ ಓರಣದಂ ಬಟ್ಟು
ಗತಿಯಲ್ಲಿ ಸುಮತಿ ಗತಿರಂಗೋಲಿ ರಂಗಿಟ್ಟು
ಹಿತದಲ್ಲಿ ಪಂಚತತ್ವ ತೈಲ ಲೇಪಿಸಿ ನಾ ॥೧॥

ನರಜನ್ಮ ನಾರ ಬಿಡಿಸಿ ತೇದು ತೇದು ಸಪೆಮಾಡಿ
ಕರದೆಡಬಲ ಹೊಸೆದು ಉದ್ದ ನುಲಿಯು ರಚಿಸಿ
ಗುರಿ ಎಂಬ ಗರಿಕಟ್ಟೆ ನೇಟಾಗಿ ದುಂಡಸುತ್ತಿ
ಪರಿಯಿಂದ ಹೆಣೆದ್ಹೆಣೆದು ಗುರುದೇವಗೆ ನಾ ॥೨॥

ಕರಪಾದಗಳೊಗ್ಗುಡಿಸಿ ನಾಲ್ಕು ಕಾಲ್ಗಳ ಮಾಡಿ
ನರ ನೂರಾರ್ ಜೋಡಿಸಿ ಹುರಿಗೋಲ ಮಾಡಿಸಿ
ಕರಣ ಚತುಷ್ಟಯುವೆಂಬ ಕಾಚಾವ ಬಿಡಿಸಿ
ಹಿರಿದಾರು ಗುಣಗಳ ಕಿರಿಹಗ್ಗ ಬಿಗಿದು ನಾ ॥೩॥

ಎರಡುಸಾವಿರ ಸಂದು ನುಲಕೆಯಲ್ಲಿ ಮುಚ್ಚಿ
ಅರುವಿನ ಎಳೆಜೋಡು ಜೋಕೀಲಿ ಬಿಡಿಸಿ
ಕರಿಗೊಂಡಲೆವ ಕುಂಡಲಿ ತಡೆಯುದಲಿರಿಸಿ
ಬಿರಿಜೋಡು ನುಲಿಕೆಯು ಬಿಗಿದು ಬಯಲಲಿ ನಾ ॥೪॥

ಸಿರವಲೇಕಾಂತದರಮನೆಯಲಿ ಹೊರಸ್ಹಾಕಿ
ಸರ್ವಾರ್ಪಣ ಭಾವದ ದಿಂಬು ಗಾದಿಗಳಿರಿಸಿ
ಕರ್ಮ ಸಂಚಿತ ಕಳೆದು ಸರ್ವಸ್ವ ಮಡಿಮಾಡಿ
ಸರ್ವೇಶ ಗುರುಮಹಾಂತ ಪತಿಗೂಡಿ ಮಲಗಲು ॥೫॥

— ಕಡಕೋಳ ಮಡಿವಾಳಪ್ಪ.

## ಮನವನು

ರಾಗ : ಪೂರ್ಯಾಧನಾಶ್ರೀ  ತಾಲ : ತೀನತಾಲ

ಮನವನು ಪರಿಪಾಲಿಸು ನೀ
ಜ್ಞಾನದಾನ ಮಾಡಿ ಶಿವ | ಚಿನುಮಯ
ಪ್ರಭು ಮಾ | ಯಾರಿ ಮಾರಾರಿ ಕಾಲಾರಿ ||ಪ||

ಸೂತ್ರದಾಟ ನಿಲ್ಲಿಸಿ | ಸೂತ್ರದಿಹ ಸುಮಾಗೂಡಿ
ಗಾತ್ರತ್ರಯಾನಳಿಯುತೆ | ಚಿತ್ರದ ಚಿದ್ಬಿಂದು ತೋರಿ ||೧||

ನಾದಬ್ರಹ್ಮ ಭೇದವ | ಶೋಧಿಸಿ ದೃಢ ಚಿತ್ತನಾಗಿ
ಸಾಧಿಸಿ ಶಿವಕಲೆಯನು | ಮೋದಗೊಳುವಂತೆಯೆ ಮಾಡಿ
ಲಿಂಗಾಂಗ ಸಂಗದ | ಇಂಗಿತದ ಬೋಧವಿತ್ತು
ಲಿಂಗೈಕ್ಯನ ಮಾಡುತೆ | ಮಂಗಲ ಶಿವಯೋಗಿ ಎನಿಸಿ ||೨||

— ಹಾನ್ಗಲ್ಲ ಕುಮಾರಶಿವಯೋಗಿ.

## ಯಾತರ ಕಟಿಪಿಟಿ

ರಾಗ : ಮಿಶ್ರ  ತಾಲ : ಖವಾಲಿ

ಯಾತರ ಕಟಿಪಿಟಿ | ಒಂದಿನ | ಹೋಗ್ತಿದಿ ಲಟಿಪಿಟಿ
ಸಂಸಾರ ಮಾಡ್ತಿ ಒಳ್ಳೆ ಜಟಿಪಿಟಿ | ಭಕ್ತಿ ಮಾಡುವದ ಅತಿ ತಿಟಿಮಿಟಿ ||ಪ||

ಬರುತಲೇನು ತಂದಿ | ಇರುತಿರುತೆಲ್ಲ ಸಂದೆ ಎಂದಿ
ದ್ರವ್ಯಬಾಳಗಳಿಸೇನಂದಿ | ನನಗ ಯಾರು ಸರಿಯಿಲ್ಲೆಂದಿ
ಗಳಿಗ್ಯಾಗ ದ್ರವ್ಯಕಳೆದ್ಹೋಯಿತೆಂದಿ | ಬಳಬಳಲಿ ಅಳುವ ಮಾರಿಗೆಬಂದಿ ||೧||

ದೊಡ್ಡ ಮನಿಯಕಟ್ಟಿ | ಅದರೊಳು ಮಡದಿಯ ತಂದಿಟ್ಟಿ
ಮಡದಿಗೆ ಮೋಹದ ಮಗಹುಟ್ಟಿ | ಅವನ ಮೇಲೆ ಭ್ರಮೆಇಟ್ಟಿ
ಅಲ್ಲದ ಮಾತಿಗೆ ನೀಮನಸಿಟ್ಟಿ | ಎಲ್ಲಬಿಟ್ಟು ಎಮಬಾಧೆಗೆ ಹೊಂಟಿ ||೨||

ಪೂರ್ವಜನ್ಮದಲ್ಲಿ | ಮಾಡಿದ ಕರ್ಮವೇನು ಬಲ್ಲಿ
ನಿರ್ಮಳಾಗೊ ಇಲ್ಲಿ | ಹಿಂದಿನ ಕರ್ಮವ ತೊಳಿವಲ್ಲಿ
ಧರ್ಮದ ಗುಣವು ನಿನ್ನಲಿದ್ದರೆ | ನಿರ್ಮಳಾಗೋ ಮಹಾಂತನಲ್ಲಿ ||೩||

— ಕಡಕೋಳ ಮಡಿವಾಳಪ್ಪ.

# ಅಪ್ಪನ ಗುರುಕ್ಷೇತ್ರ

ರಾಗ : ಭೂಪ

ತಾಲ : ದೀಪಚಂದಿ

ಅಪ್ಪನ ಗುರುಕ್ಷೇತ್ರುವಂತೆ ಕಲಿ
ದೇವನ ಸುಕ್ಷೇತ್ರು ಕಲಿಪುರಕೆ ಬಂದೆ ||ಪ||
ಅಪ್ಪನ ಕರುಳಾಗಿ ಕಂಡೆನು ಕಲಿ
ದೇವನ ಪುರ ಗುರುಮಹಾಂತರ ಸೇವೆಕೊಂಡೆ |ಅ.ಪ||

ಕರಲೂರಿನಾತ್ಮ ಪುರವಂತೆ
ಹರನೆ ಕಲಿದೇವನಾಗಿದ್ದನಂತೆ
ಗುರುಪಟ್ಟ ಕಲಿನಾಥಗಿತ್ತನಂತೆ
ಕರೆಕಲ್ಲು ಮಠದೆ ಬಯಲಾದನಂತೆ ||೧||

ಕಲಿದೇವ ಕಲ್ಲಿನಾಥ ರೂಪವಂತೆ
ಕಲಿವೀರಘಂಟೈ ಮಡಿವಾಳರಂತೆ
ಕಲಿಮರುಳಸಿದ್ಧ ಖಾಸಯ್ಯರಂತೆ
ಕಲಿಪುರದ ಗುರು ಬೆಳಕವರೊಂಡೆಯುಂತೆ ||೨||

ಮೆರೆವ ಸೈದಾನಪುರವಂತೆ ಕಲಿ
ಪುರದ ಶಾಖೆಯುಂತೆ ಬಾಲಲೀಲೆ
ಪುರದ ಶಾಖೆಯುಂತೆ ಬಾಲಲೀಲೆ
ಮೆರೆದಲ್ಲಿ ಬೆಳಗಿದ್ದನಂತೆ ನನ್ನಶ್ರೀ
ಗುರುಮಹಾಂತನ ಮೂಲಪುರವಂತೆ ||೩||

— ಕಡಕೋಳ ಮಡಿವಾಳಪ್ಪ

## ಏನ ನಡದಾದೊ

ರಾಗ : ನಟ್‌ನಾರಾಯಣಿ ತಾಲ : ಕೆಹರವಾ

ಏನ ನಡದಾದೊ ಇನ್ನೇನ ನಡಿತಾದೊ
ಕೂನಸಿಕ್ಕದಂಗಾಗ್ಹೆತೆಪ್ಪ ಜಗಜನರರೀತಿ ||ಪ||
ಪೌಳಿ ಇಲ್ಲದ ಗುಡಿಮಂದಿರಗಳು ಹುಟ್ಟಿ ಅಳಿತಾವೊ
ದಾಳಿಯಿಲ್ಲದೆ ರಾಜ್ಯದಿಕ್ಕಾದಿವಾಳಿಯಾಗ್ತಾವೊ
ಹೇಳಿ ಕೇಳದ ಮಕ್ಕಳು ಹುಟ್ಟಿ ಮನಿಮಾರಳಿತಾರೊ
ಗೂಳಿಯಿಲ್ಲದೆ ಗಬ್ಬಾಗಂವಂಥೆ ಆಕಳು ಹುಟ್ಟತಾವೊ
ಸೂಳಿಗೆ ಪಟ್ಟವ ಕಟ್ಟಿ ಬಾಗುವ ಪಾಳೇವು ಬರತಾದೊ
ಪಾಲ್ಕೀ ಹತ್ತುವ ಹೊಸಹೊಸ ಗುರುಗಳ ಹಾವಳಿ ನಡಿತಾದೊ ||೧||
ಗೂಟವಿಲ್ಲದ ಗ್ಯಾಡಿಯು ಬಿರಿದು ಲಕಲಕ ಹೊಳಿತಾದೊ
ನೇಟನ ಕಂಬಗಳಿಲ್ಲದ ಮನೆಗಳು ಭಾರಿ ಏರತಾವೊ
ಮಾಟವಿಲ್ಲದಾಕೆಗೆ ಒಲಿದು ಮಾಟಗಿತ್ತಿಯಂತಾರೊ
ಕಿರೀಟವಿಟ್ಟ ಮೆರೆಯುವ ರಾಜರು ಮಣ್ಣುಮುಕ್ಕತಾರೊ
ಖೋಟಾ ಜನಗಳೆ ಮುಂಬಂದು ನಮ್ಮ ನಾಡಳ್ತಾರೊ ||೨||
ನಾಮ ಸೀಮೆಗಾಗಿ ಬಡಿದಾಡಿ ಸಾಯುವ ಕಾಲಬರತಾದೊ
ನೇಮ ನೀತಿಯ ನಡೆಸುವ ಪೂಜ್ಯರು ಸಿಗದಂಗಾಗ್ತಾರೊ
ಸೋಮಶಿವ ವೀರಶೈವ ದುಷ್ಟರ ಕೌದಿಯಾಗ್ತಾದೊ
ಕಾಮಕೇಳಿಗೆ ಸರ್ವಮತ ಬಟ್ಟೆ ರಗಟಿಯಾಗ್ತಾದೊ
ಕಾವಿಗಳೆಲ್ಲರು ಕಾವಿ ತೊಡುವ ಕಾಲಬಂದಾದೋ
ಸ್ವಾಮಿಯು ಮಠವ ಚೌವಡಿ ಮಾಡೆಸುವ ಜನಗಳು ಬರ್ತಾರೊ ||೩||
ಕಾಸಿಗೆ ಮಕ್ಕಳ ಮಾರಿಕೊಳುವ ಕಾಲ ಬಂದಾದೊ
ಕಾಸಿಇಕ್ಕದ ಕಾರಣ ನಿಬ್ಬಣ ದಿಬ್ಬಣ ಮೆರಿತಾವೊ
ಮೀಸೆ ಇಲ್ಲದ ಗಂಡಸರ್ಹುಟ್ಟಿ ಮಂಜಾನಡೀತಾದೊ
ಶಾಸ್ತ್ರಬಾರದ ಪೆದ್ದಗೆ ಕಾಶಿ ಹುದ್ದೆ ಸಿಗತಾದೊ
ಶಾಸ್ತ್ರದ ಮದುವಗೆ ಮುಂಚೆ ಹಡೆಯುವ ಸೊಸೆಯು ಬರತಾಳೊ
ದಾಸನಾಗಿ ಪತಿಸೇವೆ ಮಾಡುವ ಗಂಡ ಮೆರಿತಾನೊ ||೪||

ಚಿಂತೆ ಇಲ್ಲಗೆ ಸಾಯುವ ಭಂಡರ ಗುಂಪೆ ಬೆಳಿತಾದೊ
ಸಂತೇಲಿಟ್ಟು ಹೆಂಡರ ಮಾರುವ ಕಾಲಬಂದಾದೊ
ಸ್ವಂತ ದುಡಿಯದೆ ಹೆರವರಿಗಾಸ್ತಿ ಹಂಚಿಹೋಗ್ತಾದೊ
ನಿಂತಾಳುವ ಪರರೋಡಿಸುವಂಥೆ ಕಾಲಬರತಾದೊ
ಮಾಂತನ ಹೆಸರಲಿ ಗಾಂಜಿಸೇಂದಿ ಭಕ್ತರು ಮೆರಿತಾರೊ
ಸಂತಶರಣರು ನೊಂದುಕೊಂಡಾಗ ಮಹಾಂತ ಬರತಾನೊ ||೫||

— ಕಡಕೋಳ ಮಡಿವಾಳಪ್ಪ.

## ಕಲಿಕೇರಿ ಪುರವ

ರಾಗ : ಭೀಮಪ್ಲಾಸ್ ತಾಲ : ದೀಪಚಂದಿ

ಕಲಿಕೇರಿ ಪುರವ ನೋಡು ಇಲ್ಲಿ
ಕಲಿನಾಥನ ಮಠವ ನೋಡು ||ಪ||
ಕಲಿವೀರ ಘಂಟೇಶ ಮಡಿವಾಳ ದೇವರು
ನೆಲೆಸಿದ ಮಹಾಕ್ಷೇತ್ರುವಿದು ನೋಡು ||ಅ.ಪ||

ಕಲಿದೇವ ದೇವರ ಐಕ್ಯಸ್ಥಲವಿದು ಶ್ರೀ
ಕಲಿನಾಥ ಗುರುಗಳ ಜನ್ಮ ಸ್ಥಲವಿದು ಮಹ
ಕಲಿಕೈತ ಶರಣರುಳಿದು ಭಕ್ತಿ ಸ್ಥಲವಿದು
ಮಲ್ಲಿಕಾರ್ಜುನನೈದ ಧರ್ಮಾಧಿಕ್ಯ ಸ್ಥಲವಿದು ||೧||

ಗುರು ವೀರಘಂಟೆಯ್ನ ಶ್ರೀಪೀಠವು ಇದು
ವರಮಡಿವಾಳಯ್ಯಗಳ ಶರಣಧಾಮವುಮಾ
ಪರಮರೀ ಗುರುಶಿಷ್ಯರಿದ್ದ ಮಹಾಕ್ಷೇತ್ರುವು
ಹರಭಕ್ತಿ ಮನದ ಜನಕೆ ಇದುವೆ ಕೈಲಾಸವು ||೨||

ಜೋಡು ಕೆರೆಗಳು ಜೋಡು ಬಸವ ಗುಡಿಗಳಿಲ್ಲ
ನೋಡು ನಾಗನಲಿಂಗದ ಹುಲಿಬಸವ ಗುಡಿಯಿಲ್ಲಿ
ಕಾಡಲಿಂಗ ಪುರದಲಿಂಗ ಮತ್ತೆಹೊಂಡದ ಲಿಂಗವಿಲ್ಲಿ
ಜೋಡುಭಾವಿ ಊರುನೋಡು ಗುರುಶಿಷ್ಯರ ಕುರುಹಿನಲ್ಲಿ ||೩||

ವೀರಘಂಟೇಶ್ವರರ ಶ್ರೀ ಮಡಿವಾಳೇಶ್ವರರ
ಸಾರಿನೋಡು ಈ ಜೋಡಿ ತೇರ ಭವ್ಯ ಸುಂದರ
ತೇರಿಗೆ ಕಾಯ್ಫಳಾರ ತೂರಿ ಜಾತ್ರೆಮಾಡು ಭರಪೂರ
ಸೇರಿ ಘನಮಠದವನ ಸಾಕ್ಷಿ ಜಾತ್ರೆ ಮುಗಿಸು ಪೂರ ॥೪॥

– ಘನಮಠದ ಶಿವಯೋಗಿ.

## ಗುಟ್ಟಿನ ಮಾತ

ರಾಗ : ಮಿಶ್ರ  ತಾಲ : ಕೇರವಾ

ಗುಟ್ಟಿನ ಮಾತ ಹೇಳ್ತಿನಿ ಬಾರೊ
ಎಟ್ಟಗುಣ ಬಿಟ್ಟಾಲಿಸಿ ಕೇಳೊ
ಸತ್ಯದ ಮಾತಿದು ತಮ್ಮಾ ನಿತ್ಯವ ತಿಳಿನೀ ತಮ್ಮಾ ॥ಪ॥

ಕಾಮ ಕ್ರೋಧಾದಿ ಜಾಲ ಹರಿದೊಗೆದು
ನಾಮ ಸೀಮೆಗಳ ಗೆದ್ದು ಮುಂದುಲಿದು
ಸ್ವಾಮಿ ಗುರುವಾಗಿ ಇರತಾರ ನಿಜ
ನೇಮಿಯಾಗಿ ವರ ಕೊಡತಾರ ಗುರು
ಸ್ವಾಮಿ ತತ್ವ ಪಾಲಿಸುವಂಥ ಸ್ವಾಮಿಗಳಿಗೆ ದೂರಾಗಬ್ಯಾಡ
ಅವರಿಗೆ ಸಾಮಾನ್ಯರೆಂದೆಂದೆನಬ್ಯಾಡ
ಅಂದರೂ ಅನವಲ್ಲಿ ಗುಟ್ಟೊಂದು ಹೇಳ್ತೀನಿ
ಮಠದಸ್ವಾಮಿ ಹಣ ತಿನ್ನಬ್ಯಾಡ ಅದು ಬೆಂಕಿ
ಸುಟಗೊಂಡು ಸಾಯಬ್ಯಾಡ ಕೇಳ್ ತಮ್ಮಾ ॥೧॥

ಓದುವ ಗುರುಕುಲ ವೇದಾಧ್ಯಯನ
ಸಾಧನ ಸಂಪದ ಭಾರತ ತಾಣ
ಮೋದದಿ ಈ ಮಾತ ಕೇಳಬೇಕು
ವಿದ್ಯಾಬುದ್ಧಿ ಕಲೀಬೇಕು ಹಾದಿಬಿಟ್ಟು
ಇದನೇ ಮರೆತು ಬೀದಿ ಕಾಮಣ್ಣಾಗಬ್ಯಾಡ

ಚಂದಚಂದ ಹೆಂಗಸರ ನೋಡಬ್ಯಾಡ
ನೋಡಿದ್ರೂ ನೋಡವಲ್ಲಿ ಗುಟ್ಟೊಂದು ಹೇಳ್ತೀನಿ
ಕಣ್‌ಸನ್ನಿ ಮಾಡಿಅವರ್ನ ಕರಿಬ್ಯಾಡ
ಹೆಂಗಸರಿಂದ ಒದಿಕಿ ತಿನಬ್ಯಾಡ ಕೇಳ್‌ತವ್ವಾ ।೨॥

ಭೇದ ಗುಣದ ಮಹಾಮೋಸದ ಜನತೆ
ಮಾದಿಗ ವೃತಿಸಾಧನವೆನ್ನುತೆ
ಸಾಧೂರಾಗಿ ಹೊಂಟಾರ ದುರ್ಬೋಧಾಮಾಡಾಕ ಬರ್ತಾರ
ಹಾದಿಬಿಡಿಸುವ ರೊಕ್ಕ ಕಸಿಯುವ
ಸಾಧುರ ಮಠಕ ಹೋಗಬ್ಯಾಡ ಅವರ
ಬೋಧಾ ನೀನು ಕೇಳಬ್ಯಾಡ
ಕೇಳಿದ್ರೂ ಕೇಳವಲ್ಲಿ ಗುಟ್ಟೊಂದು ಹೇಳ್ತೀನಿ
ಕೆಟ್ಟಚಟ ಕಲಿತು ಹಾಳಾಗಬ್ಯಾಡ
ಮನಿಬಾಳ್ವೆಬಿಟ್ಟು ಹೋಗಬ್ಯಾಡ ಕೇಳ್‌ತವ್ವಾ ॥೩॥

ಹದಿಮೂರ ಹದಿನಾಲ್ಕು ವರುಷಾಗಲು ನೀನು
ಹದಿಬದಿ ಧರ್ಮವು ದೇವರು ಎನ್ನು ನೀನು
ನಂಬು ತಾಯ್ತಂದೆಗಳ ಮಾತನ್ನು
ಅದನೀ ಮರೆತು ಹರೆಯದಿ ಬೆರೆತು
ಯಾವದೋ ಹೆಣ್ಣಿಗೆ ಮರುಳಾಗಬ್ಯಾಡ
ಮದುವ್ಯಾಗಿ ಆಕೀನ್ನ ತರಬ್ಯಾಡ
ತಂದರೂ ತರವಲ್ಲಿ ಗುಟ್ಟೊಂದು ಹೇಳ್ತೀನಿ
ಹೆಂಡ್ತಿ ಮುಂದ ಹಗಲೆಲ್ಲ ಕುಂದ್ರಬ್ಯಾಡ
ಹಲ್ಲ ಕಿಸಿಬ್ಯಾಡ ಕೇಳ್‌ತವ್ವಾ ಗುಟ್ಟಿನಮಾತ ॥೪॥

ಸತ್ಯಧರ್ಮ ನೀತಿ ನ್ಯಾಯ ಸತ್ಯ ಎಂದೆಂದು ಜಗಧಾಗ
ಸತ್ತಮರೀ ರೀತಿಹೇಳ್ಯಾರ ನಮ್ಮ
ವೃತ್ತಿಯಾವದೆಂದು ತಿಳಿಸ್ಯಾರ
ನಿತ್ಯ ತೃಪ್ತರು ಹೇಳಿದ ಮಾತ್ನ

ಮುರ್‍ತು ಮಹಾಪಾಪ ಮಾಡಬ್ಯಾಡ
ಮರ್ತ್ಯದ ಹುಳವಾಗಿರಬ್ಯಾಡ
ಇದ್ದರೂ ಇರವಲ್ಲಿ ಗುಟ್ಟೊಂದು ಹೇಳ್ತಿನಿ
ಕರ್ತೃಮಹಾಂತನ ಮರಿಬ್ಯಾಡ
ಮರ್ತು ಮತ್ತಮತ್ತೆ ಹುಟ್ಟಬ್ಯಾಡ ಕೇಳ್‌ತಮ್ಮಾ ||೪||

— ಕಡಕೋಳ ಮಡಿವಾಳಪ್ಪ.

## ಹಾಲಕಾಸ ತಂಗಿ

ರಾಗ : ಕಾಲಂಗಡಾ ತಾಲ : ಖವಾಲಿ

ಹಾಲಕಾಸ ತಂಗಿ ಹಾಲಕಾಸ
ತಳ್ಳೀರ ಮಾಡಿ ಜ್ಞಾನಾಗ್ನಿಯೊಳಗ ||ಪ||

ಕೆಟ್ಟ ಗುಣದ ಗೊಬ್ಬರೆಲ್ಲ ಗ್ವಾಳಿಮಾಡ
ಧಿಟ್ಟ ನೀ ಎಲ್ಲವನ್ನು ಹುಡುಗಿ ಕೊಡ
ನೆಟ್ಟನೊಲಿ ಮ್ಯಾಲಿಟ್ಟು ಸುಡಸುಡ
ಸುಟ್ಟು ಹಾಲ ಕಾಸವ್ವ ಗಡಗಡ ||೧||

ಹಸನ ತೊಳಿ ಮುಸುರಿ ಗಡಿಗಿ ಸಿಂಪಿಯಿಂದ
ಅಸಮ ಸ್ವಾಸ ನಿಲ್ಲಸಿ ಹಾಲ ಆರಿಸ
ಮೊಸರಿನಲ್ಲಿ ಕಡಗೋಲಿಟ್ಟು ಕಟಿಗು
ಸುಸಮ ಹುಳಿ ಕಡದು ಕಡದ್ಬೆಣ್ಣಿಯ ತೆಗಿಯ ||೨||

ಪುಣ್ಯವೆಂಬ ಬೆಣ್ಣಿಮುದ್ದೆ ಅರಿವಿನಿಂದ
ಚೆನ್ನ ಕರಗಿಸಿ ಶಾಂತಿ ತುಪ್ಪ ಮಾಡ
ತಿಂಥೀಣಿ ಮೌನಪ್ಪಯ್ಯಗೆ ಎಡಿಯಮಾಡ
ಚಿಂತೀಯ ಹರಿದು ಅವನ ಕಾಂತಿ ಕೂಡ ||೩||

— ತಿಂಥಿಣಿ ಮೌನಪ್ಪಯ್ಯ.

# ಮಹಾಂತೇಶನ ನೆನಿಸಿ

ರಾಗ : ಕಲಾಶ್ರೀ ತಾಲ : ಕೇರವಾ

ಮಹಾಂತೇಶನ ನೆನಿಸಿ ನಾ ಹೇಳುವ ಸರತಿ
ನನಗ ಬಂದೈತಿ | ಕೇಳುವ ಸರತಿ ನಿಮಗಸಿಕ್ಕೈತಿ
ಎಂಥಾ ಕಾಲಬಂದೈತಿ | ಇನ್ನೆಂಥ ಕಾಲಬರತೈತಿ ||ಪ||
ಸತ್ಯ ಸುಡಗಾಡ ಸೇರತೈತಿ | ನಿತ್ಯನೆಲದಾಗ ಹುಗಿತೈತಿ
ಮೃತ್ಯ ಮನುಜರು ನಾವೆ ದೇವರೆನ್ನುವ ಸರತಿ ಸುರವಾಗೈತಿ
ಕತ್ತೆಗೆ ಕುದುರೆನ್ನೊವಾತೈತಿ | ಕಸ್ತೂರಿ ಕಸವಾಗಿರದಾಗತೈತಿ
ಜಾತ್ರೆಕ್ಷೇತ್ರ ತೀರ್ಥಂಗಳ್ ಕರ್ಮಯಾರೊಕೈಯಲಿ ಹಾಳಾಗತೈತಿ ||೧||
ಗೌಡರಗೌಡ್ಕಿ ಅದು ಕಡಿಬಿಡ್ಕಿ | ನಾಡಗೌಡರ ಹೆಸರಿಲ್ಲದಾಗತೈತಿ
ಮಾಡುವ ನೀಡುವ ಹಾಡುವ ಜನಕೆ ಮಾಬೆಲೆ ಸಿಗದಂಗಾಗತೈತಿ
ಮಾಡುಣ್ಣುವರಿಲ್ಲದಾಗತೈತಿ | ಕಾಡಿಕಸಿವ ಕಳ್ಳತನ ಜೋರೈತಿ
ಸೀಡಿಸಿಕೊಂಬುವ ತಿರುಪೆಗೆ ದೇಶವೆ ಹೋಳಾಗಿ ಹಾಳಾಗಿ ಹೋಗತೈತಿ ||೨||
ಊರನ ಕೇರಿ ಹಾದರಗೇರಿ | ಯಾರಿದ್ದುದೊ ಗೌರವದ ಕೇರಿ
ಯಾರು ಗರತಿ ಗೌರವ ಹಾದರಗಿತ್ತಿ ಎನುವಂಗಾಗತೈತಿ
ಊರ ಹೊರಗಿನ ಹೊಲಗೇರಿ | ಊರೊಳಗ ಕಾರ್‍ಭಾರ ಭಾರಿ
ಹಾರೋರಪೋರಿ ಹೊಲಗೇರಿ ಸೊಸಿಯಾಗಿ ಕುಣಿಯುವ ಕಾಲಬರತೈತಿ
ವೇದ ಓದಿದ್ದು ಬಾಯೈತಿ | ನಾದ ಹಾಡುವದು ತಂತೈತಿ
ವೇದಾಂತದ ನಿಜ ಹೀಗೆನ್ನುತ ದುರ್ಮಾಗದಿ ಬಳಸುವದೈತಿ
ಸಾಧೂರ ಸೋಗು ಏಳತೈತಿ | ಭೇದಗುಣಗಳತಿ ಬಿತ್ತೈತಿ
ಸಾದಾಸೀದಾಸ್ವಾಮಿಗಳ್ನಮಠಬಿಡಿಸುವ ಕಾಲಬರತೈತಿ ||೪||
ಶರಣ ಸಂತರು ಗುರು ಚರ ದಾಸರು | ಸಿರುಕಿಸಲಿಲ್ದಂಗಾಗತೈತಿ
ಕರೆಯದೆ ಬಂದು ತಾವೆವುಣ್ಣುವ ಗುರುಸ್ಥಲ ವಿಚಿತ್ರವಾಗತೈತಿ
ಮರಣಿಗಳೆಲ್ಲಗು ಶರಣರೆ ಎಂದು | ಕರೆಸಿಕೊಳ್ವ ಹುಚ್ಚುಮುಂದೈತಿ
ಗುರುಮಹಾಂತೇಶನ ಮನವು ಅಳುಕಿದಾಗ ಶರಣಸಂತತಿಬರತೈತಿ ||೫||

— ಕಡಕೋಳ ಮಡಿವಾಳಪ್ಪ.

# ಮಡಿವಾಳನಾರು

ರಾಗ : ಕಲಾವತಿ ತಾಲ : ಝಂಪೆತಾಲ

ಮಡಿವಾಳನೆಂಬುವರು ಮಡಿವಾಳನಾರು
ಮಡಿವಾಳನ್ನ ನೆಲೆ ತಿಳಿದ ಪೂಜ್ಯರಾರು ॥ಪ॥

ವೀರಭದ್ರನ ರೂಪತಾನಾಗಿ ಬಂದ
ದೇವ್ರುಹಿಪ್ಪರಗಿ ವೀರಮಾಚಯ್ಯನು
ವೀರಶೈವಾಚಾರ್ಯ ಕಲಿದೇವನುತವ
ಸೇರಿ ಶಾಸ್ತ್ರಾಚಾರ್ಯನಾಗಿ ಮೆರೆದವನು ॥೧॥

ನಲುವೀಲಿ ಗುರುಬಟ್ಟೆ ತೊಳೆದ ಮಡಿವಾಳ
ಕಲಿನಾಥರೊಲಿಸಿ ಗಣದೀಕ್ಷೆ ಪಡೆದವನು
ಶ್ರೀ ವೀರಘಂಟೇಶ ಗುರು ಪೊಂದಿಅಂದು
ಕಲಿಪುರದ ಮಠದೆ ಸಮಾಧಿ ಗೊಂಡವನು ॥೨॥

ವರಗಣಾಚಾರ್ಯ ಮಠದಯ್ಯನವನಂದು
ಗುರು ಕಲ್ಲಿದೇವರಿಪ್ಪರಗಿ ಬೆಳಗಿದನು
ನರರ ಬಾಳಬಟ್ಟೆ ತ್ರಿಮಲವ ತೊಳೆದವನು
ಹೊರಬಾಳಿನಗಸಲ್ಲ ಗುರುವಗಸನಿವನು ॥೩॥

ಮಡಿವಾಳ ಮಡಿವಾಳ ಮಡಿವಾಳನೆಂದು
ಮಡಿಯಲ್ಲಿ ಕಲಿಕೇರಿ ಗುರುಮಠಕ್ಕೆ ಬಂದು
ಮೃಡವೀರ ಘಂಟೇಶ ಮಡಿವಾಳ ಕಾಯೆಂದು
ದಿಡಗೀಲಿ ಎರಗಿದ ಎಮ್ಮವ್ವಗೊಲಿದವನು ॥೪॥

ಪರಮ ಮಡಿವಾಳಯ್ನ ವರದ ಕುಡಿ ನಾನು
ವಿರುಪಾಕ್ಷ ಸತಿಯು ಮಗುವಾಗಿ ಜನಿಸಿದೆನು
ಗುರುವೀರಘಂಟೆಯ್ನ ಮಾಂತ ಬೆಳಕುಂಡು
ಗುರುಮಹಾಂತನ ಕೂಡಿ ಪೂರ್ಣ ಬೆಳಗಿದೆನು ॥೫॥

— ಕಡಕೋಳ ಮಡಿವಾಳಪ್ಪ.

# ಅಹಹಾ ವೀರ

ರಾಗ : ಮಿಶ್ರ ತಾಲ : ಕೇರವಾ

ಅಹಹಾ ವೀರ ಅಹಹಹ ರುದ್ರ
ಅಹಹಾ ಶರಬ ಅಹಹಹ ವೀರಭದ್ರ ಕಡೆ ।ಪ॥
ಅಹಹಹ ರುದ್ರ ಅಹಹಹ ಭದ್ರ
ಅಹಹಹ ಶರಬ ಕಲಿವೀರ ಭದ್ರ ॥ಅ.ಪ॥

ಕಲಿದೇವ ರುದ್ರ ಕಲಿವೀರ ಭದ್ರ
ಕಲಿನಾಥ ಶರಬ ಅನಾದಿ ಶ್ರೀರುದ್ರ
ವೀರಘಂಟೇಶ್ವರ ಕಲಿದೇವ ರುದ್ರ
ಮಡಿವಾಳದೇವ ಶ್ರೀ ವೀರಭದ್ರ ॥೧॥

ಹರನ ನಿಂದಿಸಿದ ದುರುಳ ದಕ್ಷನ
ಶಿರವ ಹರಿದು ಕುರಿ ತಲೆಯನ್ನಿಟ್ಟ
ಹರಧರ್ಮವನುದ್ಧರಿಸಿದ ಗಣಪತಿ
ವರಗಣಾಚಾರ್ಯ ಶ್ರೀ ವೀರಭದ್ರ ॥೨॥

ಹರನಿಗೆ ಹರತತ್ವಕ್ಕೆ ನಿಂದೆಯಂ
ದುರುಳರು ಮಾಡಲು ಶಿಕ್ಷಿಸಿ ತಿದ್ದುತ
ಹರಸುತ ಶಿಷ್ಟರ ದುಷ್ಟರ ಮಣಿಸುತ
ಚರಿಸಿದ ಆದಿ ಗಣಾಚಾರಿ ವೀರ ॥೩॥

ನರಸಿಂಹನ ಜಂಭವ ಅಳಿಸಲ್ಕೆ
ಶರಭಾವತಾರ ತಾಳಿದ ರುದ್ರ
ಹರನಿಂದಿಪ ಯಜ್ಞವ ಧ್ವಂಶಿಸಲು
ವೀರಭದ್ರನಾದ ಅಜೇಯ ವೀರ ॥೪॥

ಶರಣರ ಬಾಳಬಟ್ಟೆಯ ತೋರಿಯಲು
ಗುರು ಕಲಿದೇವನ ವಚನವ ಸಾರಲು
ಕಲಿದೇವರ ಹಿಪ್ಪರಗಿ ಗಣಮಠದ
ಗುರುಕುವರನಾಗಿ ಜನಿಸಿದ ಭದ್ರ ॥೫॥

ಗುರು ಕಲಿನಾಥರ ಆಪ್ಪಣೆಹೊತ್ತು
ವರ ಕಲಿಕೇರಿ ಮಠದಲಿ ನಿಂತು
ವೀರಘಂಟೈರೊಡಗೂಡಿ ಸಮಾಧಿಯು
ಸೇರಿ ಮೆರೆಯುವ ಕಲಿಕೇರಿ ರುದ್ರ ||೬||

– ವಸ್ತ್ರದ ರೇವಣಶಿದ್ಧಯ್ಯ

## ಮಂಗಲ ಮೂರುತಿಯಾಗಲಿ

ರಾಗ : ಭೂಪ ತಾಲ : ದೀಪಚಂದಿ

ಮಂಗಲ ಮೂರುತಿಯಾಗಲಿ ವೀರಘಂಟೇಶ
ನಂಘ್ರಿ ಪೂಜೆಯ ನಡೆಸಲಿ ಮಡಿವಾಳೇಶ |ಪ|

ಸೊಗದ ಧರೆಮಠ ಗದ್ದಿಗಾಗಲಿ
ಚಿಗಿವ ಗಿಡಮರ ಕಂಭವಾಗಲಿ
ಗಗನ ದಿಶಗುಡಿ ಗೋಪುರಾಗಲಿ
ಜಗವೆ ಕಲಿಪುರ ಕ್ಷೇತ್ರವಾಗಲಿ ||೧||

ಭೂ ನದಿ ಕೊಳ ಮಜ್ಜನಾಗಲಿ
ಚೆನ್ನ ಹಿಮಗಿರಿ ಭಸಿತವಾಗಲಿ
ಕಾನನವೆ ಹೂ ಪತ್ರಿಯಾಗಲಿ
ಹೊನ್ನ ಬಿಸಿಲದು ಧೂಪವಾಗಲಿ ||೨||

ಮಂದ ಮಾರುತ ಚವರಿಯಾಗಲಿ
ಅಂದ ಬಯಲು ನಗಾರಿಯಾಗಲಿ
ಚಂದ ಮುಗಿಲದು ದರ್ಪಣಾಗಲಿ
ಚಂದ್ರ ರವಿಯಾರತಿಗಳಾಗಲಿ ||೩||

ಬೆಳೆದ ಫಲ ನೈವೇದ್ಯವಾಗಲಿ
ಪೊಳೆವ ತನುಮನ ವೀಳ್ಯೆಯಾಗಲಿ
ಇಳೆಯ ಜನ ಗುರು ಭಕ್ತರಾಗಲಿ
ಫಲಿದು ಘನಮಠದೀಶ ಹಾಡಲಿ |೪|

– ಘನಮಠ ಶಿವಯೋಗಿ

## ಜಯ ಕಲ್ಲಯ್ಯ

ರಾಗ : ಹಂಸಧ್ವನಿ ತಾಲ : ಖವಾಲಿ

ಜಯ ಜಯ ಕಲ್ಲಯ್ಯ ಜಯ ಜಯ ಮಲ್ಲಯ್ಯ
ಜಯ ವೀರಘಂಟಯ್ಯ ಮಡಿವಾಳ ಮಾಚಯ್ಯ
ಕಲಕೇರಿ ಗುರುವಯ್ಯ ಜಯ ಜಯತು ಜಗದಯ್ಯ ||ಪ||

ಪತಿವ್ರತಾ ಸ್ತ್ರೀಯಳಿಗೆ ಒಲಿದೆಯ್ಯ ಕಲ್ಲಯ್ಯ
ಅತಿದೂರ ಹೊನ್ನಾಳಿಗ್ರಾಮದೊಳ್ ನೀನಿದ್ದು
ಸ್ತುತಿ ಕೇಳಿ ಕಲಕೇರಿ ಗುಡಿಯೊಳಿರ್ದೆಯ್ಯ
ಅಲ್ಲಿಲ್ಲಿ ಒಂದೆ ಸಮಯದಿ ಕಂಡು ಪೊರೆದೆಯ್ಯ
ಎಲ್ಲಲಿ ಇರುವ ಸರ್ವಾಂತರ್ಯಾಮಿ ನೀನಯ್ಯ ||೧||

ಅತಿಭಕ್ತ್ಯೆ ಜಳಕಿಯ ತಾಯಿಯ ಮೊರೆಕೇಳಿ
ಅತಿ ಬೇಗದಿ ಅವಳ ಪತಿಯ ಬದುಕಿಸಿದೆಯ್ಯ
ಬ್ರಹ್ಮ ಬರಹವನು ಅಳುಕಿಸುತ ಮೆರೆದೆಯ್ಯ
ಬ್ರಹ್ಮ ವಿಷ್ಣ್ವಾದಿಗಳಿಗಧಿಕ ನೀ ಕಲ್ಲಯ್ಯ
ಪರಬ್ರಹ್ಮ ಪರಶಿವನು ನೀನು ಗುರುವಯ್ಯ ||೨||

– ವಸ್ತ್ರದ ರೇವಣಶಿದ್ದಯ್ಯ.

## ಹುಲಿಯಿಂದ ಸೇವೆ

ರಾಗ : ರಾಗೇಶ್ರೀ ತಾಲ : ತ್ರಿತಾಲ

ಅಯ್ಯಪ್ಪ ನೀನೆ ಜಗದಪ್ಪ
ಕಲಿಪುರದ ಮಠದಪ್ಪ ಶಿವನಪ್ಪ ನೀನೆ ||ಪ||

ಕಾಷಾಯಾಂಬರಧಾರಿ ಮಾಯಾರಿ ಮಾರಾರಿ
ಕಾಸಪುರದಯ್ಯ ಉದಾರಿ ಸೊಗಹಾರಿ ಕರುಣಾವಾರಿ ||೧||

ಗುಡುಗು ಹಾಕುತ ಬಂದ ಬೆಬ್ಬುಲಿಯು
ದಿಡಿಗಿಲಿ ಬಾಗಿಸಿಕೊಂಡೆ ಮಹಿಮಯ್ಯ ||೨||
ಆಕಳದೊಂದಿಗೆ ಹುಲಿಯನು ಮಠದೆ
ಸಾಕಿಸಲಹಿದ ಪ್ರಾಣಿ ದಯಾಮಯ ||೩||
ತನು ಗವಿಯಲ್ಲಿ ಗುಡುಗುಡಿಸುತಿಹ
ಮನ ಹುಲಿಯನ್ನು ಮಣಿಸಿ ಕಾಯಯ್ಯ ||೪||
ದೇವ ವೀರಘಂಟೆ ಮಡಿವಾಳರಾಯ
ಭಾವಭರಿತ ಭಗವಂತ ನೀನಯ್ಯ ||೫||

– ವಸ್ತ್ರದ ರೇವಣಶಿದ್ದಯ್ಯ.

## ಶ್ರೀ ವಿಜಯಮಹಾಂತೇಶ

ರಾಗ : ತಿಲಕಶ್ರೀ ತಾಲ : ಕೇರವಾ

ಶ್ರೀ ವಿಜಯಮಹಾಂತೇಶ । ಇಲಕಲ್ಲ ಪುರವಾಸ
ವಿಜಯಮಹಾಂತೇಶ ಸುಜನಪರಿಪೋಷ ಪರಮಲೀಲಾವಿಲಾಸ ||ಪ||

ಚಿತ್ತರಗಿ ಚಿಜ್ಜ್ಯೋತಿ ವಿಶ್ವವಿಭೂತಿ ಶಿವಧರ್ಮ ಕೀರ್ತಿ
ಭುವನ ವಿಖ್ಯಾತಿ ಶರಣತತ್ವದ ಕ್ರಾಂತಿ ಭಕ್ತ ಸಂಪ್ರೀತಿ
ಶರಣೆಂಬೆನು ಶಿವಯೋಗಿ । ಯೋಗ ವಿಶ್ರಾಂತಭೋಗಿ ||
ದೀನಬಂಧು ಕಾರುಣ್ಯಸಿಂಧು ಭವತಾಪ ಹರಿಸಯ್ಯ ಎಂದು
ಸ್ವಾಮಿಯೆಂದು ನೆನೆದವರ ಮನದೆ ನೆಲಿಸಯ್ಯ ಪ್ರಭುವೆ ಎಂದೆಂದು
ಶ್ರೀ ವರದಾನವ ನೀಡು ಮುಂದೆಂದು ಮಹಾಂತಮಹಿಮಾಸಿಂಧು ||೧||

ಮಳೆಯ ಬರಿಸಿ ಇಳೆಯಲ್ಲ ತಣಿಸಿ ನೀ ಹೋಳಿಗೆ ತುಪ್ಪವ ಉಣಿಸಿ
ಕಾದಎಣ್ಣೆಯಲಿ ಕೈಯ್ಯನಿರಿಸಲು ತಂಪಾಗಿ ನೀನೆ ನೆಲೆಸಿ
ಕುಷ್ಟರೋಗವನು ಕಳೆದು । ಶಿಷ್ಟರನ್ನು ನೀ ಪೊರೆದು
ನಿಷ್ಠೆಯಿಂದ ನೆನೆದವರ ಕಷ್ಟಗಳ ಹರಿದು ಹೃದಯದಲಿನಿಂದು
ಸೃಷ್ಟಿಗೀಶ ಗುರುಮಹಾಂತೇಶ ಚಿತ್ತರಗಿದೀಶನೆಂದಾನು
ಶರಣು ಬಂದಿರುವೆ ಕರುಣಿಸಯ್ಯ ಮಹಾಂತ ಮಹಿಮಾಸಿಂಧು ||೨||

ಶಿವಯೋಗಮಂದಿರಕೆ ಪುಣ್ಯತಾಣವನು ತೋರಿ ಮೆರೆದೆ ತಂದೆ
ಮಹಾಂತಮ್ಮ ಗೋಮಾತೆಯು ಹೃದಯದಿ ಲೀಲೆ ತೋರುತಲಿನಿಂದೆ
ಜಾತಿಭೇದಗಳನಳಿದು । ನೀತಿ ಮಾರ್ಗದಿ ನಡೆದು
ವೀರಶೈವದ ಧರ್ಮಧ್ವಜವನು ಎತ್ತಿ ಜಗದಿ ಮೆರೆದು
ಸರ್ವಧರ್ಮಗಳ ಕರುಣೆಯಲಿ ನೀ ಕಂಡು ಕೃಪೆಯ ಸುರಿದು
ಕುಮಾರಯೋಗಿಯ ಹೃದಯದಿ ಬೆರೆದ ಮಹಾಂತ ಮಮಾಸಿಂಧು ॥೩॥

– ವಿಜಯಮಹಾಂತೇಶ ನಾಟಕದಲ್ಲಿ ಹಾಕಿದ್ದು.

## ಯಾಕ ಮಾಡತೀದಿ

ರಾಗ : ಪಹಡಿ ತಾಲ : ಖವಾಲಿ

ಯಾಕ ಮಾಡತೀದಿ ನೀ ಒಣ ಚಿಂತಿ
ನಿನಗೆ ಬಡಕೊಂಡಾವ ಮಾಯದ ಭ್ರಾಂತಿ ॥ಪ॥
ಅದಕ ಜೋತಗೊಂಡು ನೀ ಕುಂತಿ
ನಾಳೆ ಯಮ ಕೇಳಿದರೆ ಏನಂತಿ ॥ಅ. ಪ॥
ಮನಿಯ ಕಟ್ಟಿಸಿದಿ ಮಾಳಿಗಿ ಮಾಳಿಗಿ
ನಿನಗ ಹೋಗುವದ ಬಂತಲ್ಲೊ ನಾಳಿಗಿ
ಗೊಂಗಡೀದು ಮಾಡತಾರ ಜೋಳಿಗಿ
ನಿನ್ನ ಇಟ್ಟ ಬಂದು ಉಣತಾರಲ್ಲೊ ಹೋಳಿಗಿ ॥೧॥
ಹೆಂಡರು ಮಕ್ಕಳೆಲ್ಲ ಸಂಪತ್ತು
ನೀ ಹುಟ್ಟಿದಾಗದು ಎಲ್ಲಿತ್ತು
ನಟ್ಟನಡುವೆ ತಾ ಗಂಟಬಿತ್ತು
ನೀ ತಿಳಿದು ನೋಡೋ ಅದರಾಗ ಕುಂತು ॥೨॥
ಸಂಕಟ ಪಡತೀದಿ ಸಾಯೂದಕ
ಪಟಪಟ ಹುಣ್ಣಲ್ಲೊ ಮಾಯೂದಕ
ಕರ್ತೃ ಮಹಾಂತೇಶ ಬಲ್ಲ ಸರ್ವದಕ
ಅವನ ಹೊರತು ಮತ್ತಾರಿಲ್ಲ ದಿಕ್ಕ ॥೩॥

– ಕಡಕೋಳ ಮಡಿವಾಳಪ್ಪ.

## ಮಾನಗೇಡಿ ಮಂದಿ

ರಾಗ : ಪಹಡಿ ತಾಲ : ಖವಾಲಿ

ಎಪ್ಪಾ । ಮಾನಗೇಡಿ ಮಂದಿ ಹುಟ್ಟಿ ಮರ್ತ್ಯ ಕೆಡಿಸ್ಯಾರೊ
ಎಪ್ಪಾ । ಉಢಾಳಮಂದಿ ಊರೊಳಗ ತುಂಬಿಬಟ್ಟಾರೊ ॥ಪ॥
ಎಪ್ಪಾ । ಸತ್ಯವಾಡುವ ಉತ್ತಮರೆಲ್ಲ ಎತ್ತಹೋದರೊ
ಎಪ್ಪಾ । ಗಪ್ಪೆ ಹೊಡಿಯುವ ಅಪ್ಪದೇವರು ಹೆಚ್ಚಿಗಾದರೊ ॥ಅ.ಪ॥

ಪುಡಾರಿ ಪುಡಾರಿ ಮಂದಿಕೂಡಿ ಧರೋಡಿ ಮಾಡ್ಯಾರೊ
ಪುಂಡಪುಂಡರೆಲ್ಲ ಹೊಲದ ಚಂಡಿ ಆಡ್ಯಾರೊ
ಬಡವನ ವ್ಯಾಲ ಖಟ್ಲೆಹೊರಿಸಿ ಕಟ್ಟಿಗೆಳಿಸ್ಯಾರೊ
ಇವರು ನಾಚಿಕೆಂಬುದು ರುಮಾಲ ಮಾಡಿ ತಲಿಗೆ ಸುತ್ತ್ಯಾರೊ ॥೧॥

ಈಗಿನ ಸಾಹುಕಾರರೆಲ್ಲ ಹೆಂಗೆಂಗದಾರೊ ಎಪ್ಪಾ
ಬಡವನ ಹೆಂಡತಿ ಚಲುವೆ ಇದ್ದರ ಸಾಲಾ ಕೊಡ್ತಾರೊ
ಲೆಕ್ಕಪಕ್ಕ ಇಲ್ಲದ ಇವರು ಖಾತೆ ನಡಿಸ್ಯಾರೊ
ಹೋತಿನಂಗ ಜೋತಗೊಂಡು ಮೂಲ್ಯಾಗ ಕುಂತಾರೊ ॥೨॥

ಗುರುವಿನ ಮಗ ಆದ ಬಳಿಕ ಹ್ಯಾಂಗಿರಬೇಕೊ
ಅರವು ತಿಳಿದು ಮರವಿನಾಗ ಬೀಳುದ್ಯಾತಕೊ
ಮಚ್ಚಿಲೆ ಹೊಡದಾರೆಂಬೊ ಎಚ್ಚರಿರಬೇಕೊ
ಮಹಾಂತನ ಪಾದಕ ಮೆಚ್ಚಿ ಇರಬೇಕೊ ॥೩॥

— ಕಡಕೋಳ ಮಡಿವಾಳಪ್ಪ.

## ಕಲಿದೇವನವತಾರಿ

ರಾಗ : ತಿಲಂಗ ತಾಲ : ದಾದರಾ

ಕಲಿದೇವನವತಾರಿ ವೀರಘಂಟೇಶ
ವೀರೇಶನವತಾರಿ ಮಡಿವಾಳೇಶ ॥ಪ॥

ಧರೆಯ ಪುಣ್ಯವೆಲ್ಲ ಜೋಡಾಗಿ ಬಂದು
ಹರವೀರಭದ್ರರ ಅವಳಿ ಬೆಳಗಿಂದು
ವರಕಲಿಪುರದಲ್ಲಿ ಬೆಳಗುವರು
ಕರಮುಗಿದು ಭಕ್ತರು ಬಾಗುತಿಹರು ||೧||
ಭಕ್ತರ ಭಕ್ತಿಯ ಸೇವೆಯ ಕೊಳ್ಳುತ
ಭಿಕ್ಷಾಟನದಲಿ ಲೀಲೆಯ ತೋರುತ
ಸುಕ್ಷೇಮ ಜನರಿಗೆ ಹರಸುತಲಿಹರು
ದಕ್ಷಾರಿ ಮಾರಾರಿ ಗುರುಃಶಿಷ್ಯರಿವರು ||೨||

– ವಸ್ತ್ರದ ರೇವಣಶಿದ್ಧಯ್ಯ.

## ಅಲ್ಲಾ ನೀನೆ

ರಾಗ : ಸಾರಂಗ ತಾಲ : ಖವಾಲಿ

ಅಲ್ಲಾ ನೀನೆ ಇರಗಂಟೆ
ಮೋಲಾನೀನೆ ಮಡಿವಾಳ ||ಪ||
ಪಂಚರಂಗದ ಮಠವೆ ಮಸೂತಿ
ಪಂಚ ತತ್ವದ ಪರಮ ವಿಭೂತಿ
ವಂಚಿಪ ಜನಕೆ ನೀವು ರುದ್ರಭೀತಿ
ಸಂಚರಿಸಿ ಕಾಯ್ತೀರಿ ಜಗಸಂತತಿ ||೧||
ಹಿಂದೂ ಮುಸ್ಲೀಂ ಭಾಯಿಭಾಯಿ
ಚಂದದಿ ಸಾರಿದರೈ ಗುರುಸಿರಾಮಯಿ
ಅಂದದಿ ಆಶೀರ್ವದಿಸುತ ಎಲ್ಲಗ
ತಂದೆಸಾಯಿ ನೀವು ಕಾಪಾಡುವಿರಿ ||೨||
ಹರಮತ ತತ್ವಕೆ ನೀವೆ ನಿಶಾನಿ
ಹರಧರ್ಮಕೆ ನೀವೆ ಹಸನ ಹುಸೇನಿ
ಕರುಣದಿ ಕಾಯಿರಿ ಕಲಿಕೇರಿ ಕರ್ತೃ
ಇರಗಂಟಿ ಮಡಿವಾಳ ಅಭೇದ ರೂಪರೆ ||೩||

– ವಸ್ತ್ರದ ರೇವಣಶಿದ್ಧಯ್ಯ.

# ಕಲಿಪುರದಯ್ಯ

ರಾಗ : ಪೀಲು ತಾಲ : ಖವಾಲಿ

ಕಲಿಪುರದಯ್ಯ ಕಲ್ಲಯ್ಯ
ಕಲಿ ಬೆರಗಾಗುವ ತೆರೆನಯ್ಯ
ಲೀಲೆ ಮಾಡುವೆ ಜಗದಯ್ಯ ||ಪ||

ಹರನೆ ಸೀನೆ ಧರೆಗಿಳಿದೆಯ್ಯ
ಗುರುವಾಗಿ ತೋರಿದೆ ನೀ ಕಲ್ಲಯ್ಯ
ವೀರಘಂಟೇಶರು ಮಡಿವಾಳೇಶರು
ಹರಸಿದ ಮಹಾಪ್ರಭಾರೂಪರಯ್ಯ ||೧||

ಕಲಿಪುರ ಸಂಸ್ಥಾನಮಠ ನಿನ್ನಿಂದ
ನಲಿದು ಬೆಳೆಯಿತು ನಾಡಿನತುಂಬ
ಒಲಿದರೆ ವರವಾಗಿ ಮುನಿದರೆ ಶಾಪಾಗಿ
ಇಳೆ ಎಚ್ಚರಿಸುತ ಬೆಳಗಿದೆಯ್ಯ ||೨||

ಕುಂತಳೆ ರಾಜರ ಮಾನ್ಯವ ಪಡೆದೆ
ಕಾಂತ ವೀರಘಂಟೈಮಡಿವಾಳೇಶ್ವರರ
ಶಾಂತಿಧಾಮದ ಗುಡಿಯು ಕಟ್ಟಿಸಿದೆ
ಸಂತತ ಲೀಲೆಯೋಳ್ ಜನರನ್ನು ಪೊರೆದೆ |೩||

– ವಸ್ತ್ರದ ರೇವಣಶಿದ್ಧಯ್ಯ.

# ಓ ತಂದೆ

ಗ : ಬಿಲಾಸಖಾನಿ ತಾಲ : ಖವಾಲಿ

ಓ ತಂದೆ ಶ್ರೀ ಗುರುನಾಥ
ಕಾಪಾಡು ನೀ ಪರಮಾತ್ಮ ||ಪ||
ಪತಿಪಾದ ಗತಿಯೆಂದು ಅತಿನಂಬಿರುವೆ
ಸತಿಸೌಭಾಗ್ಯವ ಯತಿರಾಜ ಮರಳಿಸೊ ||ಅ ಪ||

ಅರಿಷಿಣ ಕುಂಕುಮ ಹಣೆಯಲಿ ನಗುವಂಗ
ಹಸಿರು ಬಳೆ ವಂಕಿಗಳು ಕೈಯಲಿ ಹೊಳೆವಂಗ
ಮುತ್ತೈದಿ ಚಿನ್ನಗಳು ದೇಹದಿ ಬೆಳಗುವಂಗ
ಗುರುವೀರಘಂಟೇಶ ಮಡಿವಾಳ ಕಲ್ಲೇಶ
ಕಾಪಾಡಿ ಕಾಪಾಡಿ ಕಾಪಾಡಿ ಕಾಪಾಡಿರಯ್ಯ ॥೧॥

ಕರ್ಮವದು ಒಟ್ಟಾಗಿ ಹಾವಾಗಿ ಬಂದಿತೇನೊ
ಧರ್ಮಾತ್ಮ ಪತಿ ಪ್ರಾಣಕೊಂಡೊಯ್ದಿತೇನೊ
ಪರಮಾತ್ಮ ಕಲ್ಲೇಶ ಗುರುರಾಯ ಬದುಕಿಸೊ
ಗುರು ವೀರಘಂಟೇಶ ಮಡಿವಾಳ ಕಲ್ಲೇಶ
ಕರುಣಿಸಿರಿ ಕರುಣಿಸಿರಿ ಕರುಣಿಸಿರಿ ಕರುಣಿಸಿರಯ್ಯಾ ॥೨॥

– ವಸ್ತ್ರದ ರೇವಣಶಿದ್ಧಯ್ಯ.

## ಶಿವಶಿವ ಅನುವಲ್ಲಿ

ರಾಗ : ಮಿಶ್ರ ತಾಲ : ಖವಾಲಿ

ಶಿವಶಿವ ಶಿವಶಿವ ಅನುವಲ್ಲಿ
ಶ್ರೀಗುರುವಿನ ಪಾದ ಹಿಡಿವಲ್ಲಿ ॥ಪ॥
ಹೇಳಿದ ಮಾತನೀ ಕೇಳವಲ್ಲಿ
ನಿನ್ನ ಹೀನ ಗುಣದ ಬುದ್ಧಿ ಬಿಡವಲ್ಲಿ ॥ಅ.ಪ॥

ಹಸ್ತ ಬಂದ ಜಂಗಮ ಯೋಗಿಗೆ
ಕುಸ್ತಿ ಕಾಳಗ ಮಾಡಿದ್ಯೋ ಕಾಗಿ
ಮುಂದಿನ ಮನೆಗೆ ಹೋಗೆಂದಿ ಸಾಗಿ
ನಿನಗೆ ಪುಣ್ಯಹ್ಯಾಗೆ ದೊರತೀತೊಗೂಗಿ ॥೧॥

ಪೂರ್ವ ಪುಣ್ಯದಿ ಗಳಿಸಿದ ರೊಕ್ಕ
ನೀ ಬರೆದಿಟ್ಟೆದೀ ಜೆಳತನ ಲೆಕ್ಕ
ಕೊಳ್ಳಿ ತೊಪೊಂಡು ಕಳ್ಳ ಮನೆಯ ಹೊಕ್ಕ
[illegible] ಶಿವಶಾಪಕ್ಕ ॥೨॥

ಬರುವಾಗ ಏನೂ ತಂದಿಲ್ಲ ನೀ
ಹೋಗುವಾಗ ಏನೂ ಒಯ್ಯೋದಿಲ್ಲ
ಕರ್ತೃ ಶ್ರೀ ಗುರುದೇವ ಮಹಾಂತನೆಬಲ್ಲ
ಅವನ ಹೊರತು ಮತ್ತಾರಿಲ್ಲ ||೩||

– ಕಡಕೋಳ ಮಡಿವಾಳಪ್ಪ.

## ನಿಮ್ಮೂರಿಗೆ ನಾವು

ರಾಗ : ಮಿಶ್ರಪೀಲೂ ತಾಲ : ದಾದರಾ

ನಿಮ್ಮೂರಿಗೆ ನಾವು ಬರಬೇಕಾದರೆ
ನಮ್ಮ ನಿಮ್ಮ ಮನಸು ಒಂದಿರಬೇಕು ||ಪ||
ತನು ಮನ ಧನಕೊಟ್ಟು ಗುರುವಿನ ಪಡಕೊಂಡು
ಅರುವಿನಿಂದಹಂಕಾರ ಅಳಿದಿರಬೇಕು
ಅಂತಾದರೆ ನಾ ಬರ್ತೀವಿ ಸದಾ ||ಅ.ಪ||

ಆರು ಅಳಿದು ಆರೂಢ ಮಾರ್ಗವು
ಅದು ಒಂದು ಪಥವು ಹಿಡಿಬೇಕು
ರೂಢಿಯೊಳಗ ಮಾಡಿಮಾಡಿಮಾಡಿ
ನೀಡಿ ನೀಡಿದಂಗಿರಬೇಕು ಅಂತಾದರೆ ||೧||

ನೆನಹಿನೊಳು ಶಿವರೂಪದ ನುಡಿಗಳು
ಘನವಾಗಿ ನಿನ್ನಲ್ಲಿ ಇರಬೇಕು
ಅಜಹರಿ ಸುರ ಮನು ಮುನಿಗಳೆಲ್ಲರು
ಹೌದೆನ್ನುವಂತೆ ಇರಬೇಕು ಅಂತಾದರೆ ||೨||

ಹಮ್ಮನಳಿದು ಪರಬ್ರಹ್ಮದ ಸ್ಮರಣೆ
ಅನುಗಾಲ ನಿಮ್ಮಲ್ಲಿ ಇರಬೇಕು
ಮಡಿವಾಳ ಮಹಾಂತ ಯತಿ ಶಿವರತಿಯಿಂದ
ಲಿಂಗಭಕ್ತರಾಗಿರಬೇಕು ಅಂತಾದರೆ ||೩||

– ಕಡಕೋಳ ಮಡಿವಾಳಪ್ಪ.

# ಮಹನೀಯರ ಅನಿಸಿಕೆಗಳು

ಗುರುಸ್ವಾಮಿಯವರು ಹಾಡಿದರೆ ಸನ್ನಿಧಿಗೆ ಶಿವರಾತ್ರಿ ಹಬ್ಬ.

-ಲಿಂ. ರಂಭಾಪುರಿ ಜಗದ್ಗುರುಗಳು

ಸಭೆಯಲ್ಲಿಯೇ ಕವಿತೆ ಕಟ್ಟಿ ಹಾಡುವ ಕಲೆ ಕಲಿಕೇರಿಯವರಿಗಿದೆ. ಇವರು ಆಶುಕವಿ ಶಿಖಾಮಣಿಗಳಾಗಿದ್ದಾರೆ.

-ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯರು.

ಸಿದ್ಧಾಂತಶಿಖಾಮಣಿಯ ಸಾರವನ್ನೇ ಶ್ರೀಶಿವಾಚಾರ್ಯರಿಗೆ ವಂದನೆ ಪದದಲ್ಲಿ ಬರೆದು ಹಾಡಿ ಜನಸಾಮಾನ್ಯರಿಗೆ ಪಂಚಾಚಾರ್ಯರನ್ನು ಪರಿಚಯ ಮಾಡಿದ್ದಾರೆ ಗುರುಸ್ವಾಮಿಗಳು.

-ಅಕ್ಕಲಕೋಟಿ ಕುಂಭಾರಗೇರಿ ಮಠದ ಶ್ರೀಗಳು.

ಗೀತ ಬೇರೆ, ಸಂಗಿತ ಬೇರೆ. ಕಲಕೇರಿ ಗುರುಸ್ವಾಮಿಯವರದು ಸಂಗೀತ ನಮ್ಮೆಲ್ಲರನ್ನು ಮಂತ್ರ ಮುಗ್ಧರನ್ನಾಗಿಸುತ್ತದೆ

-ಪಂ. ಪಂಢರಿನಾಥಾರ್ಯ ಗಲಗಲಿ.

ಶಾಸ್ತ್ರೀಯ ಸಂಗೀತದಲ್ಲಿ ಸಿದ್ಧ, ಭಕ್ತಿಸಂಗೀತದಲ್ಲಿ ಬುದ್ಧರಾಗಿದ್ದಾರೆ ಗುರುಸ್ವಾಮಿ ಕಲಿಕೇರಿಯವರು.

-ಲಿಂ. ಶಂಭುಲಿಂಗ ಶಿವಾಚಾರ್ಯರು ಹುಲ್ಯಾಳ.

ಗುರುಸ್ವಾಮಿಯವರು ಹಾಡುತ್ತಿರುವ ಹಾಡುಗಳನ್ನು ಬಹಳಮಂದಿ ಗಾಯಕರು ಹಾಡುತ್ತಾರೆ. ಕೆಲವರು ಕ್ಯಾಸೆಟ್ ಮಾಡಿದ್ದಾರೆ. ಆದರೆ ಖುದ್ದಾಗಿ ಗುರುಸ್ವಾಮಿಗಳ ಬಾಯಿಯಿಂದ ಕೇಳುವಲ್ಲಿ ಒಂದು ಮಾಧುರ್ಯತೆ ಇದೆ, ಭಾವುಕತೆ ಇದೆ.

-ಸುಳ್ಳದ ಶ್ರೀಸಿದ್ಧರಾಮ ಶಿವಾಚಾರ್ಯರು.

ಯಾರೆ ಹಾಡಲಿ, ಯಾರೆ ಮಾತಾಡಿರಲಿ, ಸಭೆಗೆ ಬೇಜಾರು ಬಂದಿರಲಿ ನಿದ್ರೆ ಬಂದಿರಲಿ, ಆ ಸಮಯದಲ್ಲಿ ಗುರುಸ್ವಾಮಿಯವರು ಗಾಯನ ಮಾಡಿ ಸಭೆಯನ್ನು ಗಂಧರ್ವಲೋಕ ಮಾಡುತ್ತಾರೆ.

-ಮೌನತಪಸ್ವಿ ಶ್ರೀಚಿಕ್ಕೇನಕೊಪ್ಪ ಶರಣರು.

ಜನರು ಆಸಕ್ತಿಯಿಂದ ಕೇಳುವಂತೆ ಹಾಡುತ್ತಾರೆ ಗುರುಸ್ವಾಮಿ. ಬಹಳ ಜನ ಗಾಯಕರಲ್ಲಿ ಕಾಣದಿರುವ ವೈಶಿಷ್ಟ್ಯ ಇವರಲ್ಲಿ ಕಾಣುತ್ತದೆ.

—ಗದಗಿನ ತೋಂಟದಾರ್ಯ ಜಗದ್ಗುರುಗಳು

ಗುರುಸ್ವಾಮಿಯವರು ತಮ್ಮ ಗುರು ಡಾ. ಪುಟ್ಟರಾಜ ಗವಾಯಿಗಳಂತೆ ಸಂಗೀತದಲ್ಲಿಯೂ ಸಾಹಿತ್ಯದಲ್ಲಿಯೂ ಪರಿಣತರು. ಅಂತೇ ಮಹಿಮರ ಸ್ತುತಿ ಗೀತೆಗಳನ್ನು ಹಾಡುವಲ್ಲಿ ಹೆಸರಾಂತ ಗಾಯಕರಾಗಿದ್ದಾರೆ.

—ಮುಂಡರಗಿ ಶ್ರೀ ಜಗದ್ಗುರು ಅನ್ನದಾನೀಶ್ವರರು

ಗುರುಸ್ವಾಮಿ ಕಲಿಕೇರಿಯವರ ಸಂಗೀತ ಕಾರ್ಯಕ್ರಮವೆಂದರೆ ಸಂಗೀತ ಪ್ರೇಮಿಗಳಿಗೆ ಜಾತ್ರೆ. ಅದೊಂದು ಖುಷಿ ಜನಕ್ಕೆ. ನಮಗಂತೂ ಶಿವಪ್ರಸಾದ ಸ್ವೀಕರಿಸಿದ್ದಕ್ಕಿಂತಲೂ ಆನಂದ.

—ಚಿತ್ತರಗಿ ಇಳಕಲ್ಲ ಶ್ರೀ ಮಹಾಂತ ಶಿವಯೋಗಿಗಳು

ಹತ್ತಾರು ಪಂಡಿತರು ಕಂಠಶೋಷಣೆ ಮಾಡಿ ಪರಿಣಾಮ ಬೀರುವಷ್ಟು, ಗುರುಸ್ವಾಮಿಯವರ ಗಾನವೊಂದೆ ಪ್ರಭಾವ ಬೀರುತ್ತೆ.

—ಜ.ಚ.ನಿ.

ಸಾಹಿತ್ಯದ ಶಕ್ತಿಗೆ ಸಂಗೀತದ ಜೇನಿನ ತಿನ್ನಿಸುವ ಸುರಲೋಕದ ತೋಟಿಗ ಗುರುಸ್ವಾಮಿ ಕಲಿಕೇರಿ.

—ಲಿಂ. ಕರ್ಜಗಿ ವಿರಕ್ತಮಠದ ಶ್ರೀಗಳು

ಎಷ್ಟೋ ಜನ ಗಾಯಕರು ಗುರುಸ್ವಾಮಿಯವರ ಹಾಡುಗಳನ್ನು ಹಾಡುತ್ತಾರೆ ಆದರೆ ಗುರುಸ್ವಾಮಿಯವರ ಭಾವ ಬೆಡಗು ಎಲ್ಲರಿಗೆ ಬಾರಲಾರದು. ಅದ ಕಂಠದಿಂದಲೆ ಕೇಳಿ ಸವಿಯಬೇಕು.

—ಲಿಂ. ಸದಾಶಿವ ಮಹಾಸ್ವಾಮಿಗಳು ಹಾನಗಲ್ಲ

ಗುರುಸ್ವಾಮಿಯವರು ಭಾವಪರವಶರಾಗಿ ಹಾಡಿದಾಗ ನಮಗೆ ಕಣ್ಣೀರು ಬಂದಾಯಿತು. ಕೇಳಿದೆವು.

—ಲಿಂ. ಧಾರವಾಡ ಮೃತ್ಯುಂಜಯಪ್ಪಗಳು

ನಾವೆಲ್ಲರೂ ಮಾತನಾಡಿದ ಮೇಲೆಯೂ ಹಾಡಿ 'ಹಾಡನ್ನಾಗಿಸಿಕೊಂಡ ಶ್ರೇ ಗಾಯಕ ಗುರುಸ್ವಾಮಿ ಕಲಿಕೇರಿ.

—ಪ್ರೊ. ಎಸ್.ಎಸ್. ಭೂಸನೂರಮಠ.